ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ-

# ಶ್ರೀ ಕೃಷ್ಣನ ಕಥೆ

ಕ. ವೆಂಕಟರಾಮಪ್ಪ

ಪ್ರಕಾಶಕರು:

ತ. ವೆಂ. ಸ್ಮಾರಕ ಗ್ರಂಥಮಾಲೆ

ಕೃಷ್ಣಮೂರ್ತಿಪುರಂ : : ಮೈಸೂರು.

# ಮೊದಲ ಮಾತು

ಶ್ರೀ ಕೃಷ್ಣ ಲೋಕಪೂಜ್ಯನಾದ ದೇವಪುರುಷ; ಸ್ವಯಂ ಮಹಾವಿಷ್ಣುವಿನ ಪೂರ್ಣಾವತಾರವೆಂದೇ ವಿಷ್ಣುಭಕ್ತರೆಲ್ಲರ ನಂಬಿಕೆ. ಭಗವಂತನು ಕಂಸಾದಿ ಲೋಕಕಂಟರಾದ ದಾನವರನ್ನು ಕೊಂದು ಶಿಷ್ಟ ಸಂರಕ್ಷಣೆಮಾಡಿ ಧರ್ಮವನ್ನು ಸ್ಥಾಪಿಸುವುದಕ್ಕೋಸ್ಕರ ಭೂಲೋಕದಲ್ಲಿ ಮಾನವನಾಗಿ ಅವತರಿಸಿದನು. ಶೈಶವದಿಂದಲೇ ಶ್ರೀ ಕೃಷ್ಣನು ದೈತ್ಯಕುಲ ವಿನಾಶಕ್ಕೆ ತೊಡಗಿ ಧರ್ಮವಿರೋಧಿಗಳ ನಿಗ್ರಹವನ್ನು ಸಾಧಿಸಿದನು. ಮುಂದೆ ಪಾಂಡವರ ಪರಮ ಮಿತ್ರನಾಗಿ ಕೌರವರನ್ನು ನಿಗ್ರಹಿಸಿದ ಕಥೆ ಮಹಾಭಾರತದಲ್ಲಿ ವಿಸ್ತಾರವಾಗಿ ಬರುತ್ತದೆ. ಕೃಷ್ಣ ಚರಿತ್ರೆ ಬರುವ ಗ್ರಂಥಗಳಲ್ಲೆಲ್ಲ ಮಹಾಭಾರತವೇ ಅತ್ಯಂತ ಪುರಾತನವಾದುದೆಂದು ಬಲ್ಲವರ ಹೇಳಿಕೆ. ಆದರೆ ಅದರಲ್ಲಿ ಶ್ರೀ ಕೃಷ್ಣ ಬಾಲ್ಯ ಚರಿತ್ರೆ ಇಲ್ಲ. ಅದು ಶ್ರೀ ವಿಷ್ಣು ಪುರಾಣ ಮತ್ತು ಶ್ರೀಮದ್ಭಾಗವತಗಳಲ್ಲಿ ಬಂದಿದೆ. ಮುಮುಕ್ಷುವಾದ ಪರೀಕ್ಷಿತಮಹಾರಾಜನಿಗೆ ಶುಕಮಹರ್ಷಿಯು ಉಪದೇಶಿಸಿದ ಭಗವಂತನ ಅವತಾರ ಕಥೆಯೇ ಭಾಗವತ. ಈ ಪವಿತ್ರ ಗ್ರಂಥವು ಹನ್ನೆರಡು ಸ್ಕಂಧಗಳನ್ನೊಳಗೊಂಡು ಮಹಾ ವಿಷ್ಣುವಿನ ನಾನಾ ಅವತಾರಗಳ ವೃತ್ತಾಂತವನ್ನು ವರ್ಣಿಸುತ್ತದೆ. ಹತ್ತು ಹನ್ನೊಂದನೆಯ ಸ್ಕಂದಗಳಲ್ಲಿ ಶ್ರೀಕೃಷ್ಣ ಪರಮಾತ್ಮನ ಅವತಾರ ಕಥೆ ಇದೆ. ದೇವ ಭಾಷೆಯಲ್ಲಿರುವ ಈ ಪುಣ್ಯ ಕಥೆಯನ್ನು ಕನ್ನಡಿಗರಿಗಾಗಿ ಸರಳವಾದ ತಿಳಿಗನ್ನಡದಲ್ಲಿ ಹೇಳಿದ ಕೀರ್ತಿ ನಮ್ಮ ನಿತ್ಯಾತ್ಮ ಶುಕಯೋಗಿಯದು. ಪದ್ಯರೂಪವಾಗಿರುವ ಆ ವಿಸ್ತಾರವಾದ ಮಹಾ ಕಾವ್ಯವನ್ನು ಓದುವ ವಿರಾಮವಿಲ್ಲದ ನನ್ನ ಕನ್ನಡ ಬಂಧು ಭಗಿನಿಯರಿಗಾಗಿ ಅದರಲ್ಲಿನ ಕೃಷ್ಣ ವೃತ್ತಾಂತವನ್ನು ಆರಿಸಿಕೊಂಡು ವಚನ ರೂಪವಾಗಿ ಬರೆದಿದ್ದೇನೆ. ಆದಮಟ್ಟಿಗೂ ನಿತ್ಯಾತ್ಮ ಶುಕಯೋಗಿಯ ಮಾತುಗಳನ್ನೇ ಉಳಿಸಿಕೊಳ್ಳಲು ಪ್ರಯತ್ನಿಸಿದ್ದೇನೆ.

ಈ ಪುಟ್ಟ ಪುಸ್ತಕವನ್ನು ಅಚ್ಚುಹಾಕಿ ಪ್ರಕಟಿಸುವ ಕಾರ್ಯವನ್ನು ಕೈಕೊಂಡುದಕ್ಕಾಗಿ ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆಯ

ಸಂಪಾದಕರಾದ ಗೆಳೆಯ ಶ್ರೀ ಟಿ. ಎಸ್. ಶಾಮರಾಯರಿಗೆ ನಾನು ಋಣಿ. ಗುರುವರೇಣ್ಯರ ಹೆಸರಿನಲ್ಲಿ ಹೊರಟಿರುವ ಈ ಮಾಲೆಯಲ್ಲಿ ಈ ಪುಸ್ತಕ ಸೇರಿದ್ದು ನನಗೆ ಸಂತೋಷ.

**ಕೆ. ವೆಂಕಟರಾಮಪ್ಪ.**

## ಸಂಪಾದಕನ ಅರಿಕೆ

ಶ್ರೀಮಾನ್ ಕೆ. ವೆಂಕಟರಾಮಪ್ಪನವರು ದಿವಂಗತ ವೆಂಕಣ್ಣಯ್ಯನವರ ಶಿಷ್ಯ ಶ್ರೇಷ್ಠರಲ್ಲಿ ಒಬ್ಬರು; ದಿವಂಗತರಲ್ಲಿ ಅಗಾಧವಾದ ಪ್ರೇಮ, ಗೌರವ ಭಕ್ತಿಗಳನ್ನಿಟ್ಟವರು. ಅವರ ಈ "ಶ್ರೀ ಕೃಷ್ಣನ ಕಥೆ" ಯನ್ನು ಕನ್ನಡಿಗರಿಗೆ ಕಾಣಿಕೆಯಾಗಿ ಅರ್ಪಿಸಲು ನಾನು ತುಂಬ ಸಂತೋಷಿಸುತ್ತೇನೆ. ಕನ್ನಡ ಪ್ರಾಚೀನ ಗ್ರಂಥಗಳನ್ನು ಗದ್ಯರೂಪದಲ್ಲಿ ಕನ್ನಡಿಗರಿಗೆ ಅರ್ಪಿಸಬೇಕೆಂಬ ನನ್ನ ಬಯಕೆ ಈ ಗ್ರಂಥ ಪ್ರಕಟಣೆಯ ಮೂಲಕ ಮುಂದುವರಿದಂತಾಗುವುದು ನನ್ನ ಸಂತೋಷಕ್ಕೆ ಮತ್ತೊಂದು ಕಾರಣ. ಈ ಸಂತೋಷವನ್ನು ಒದಗಿಸಿದ ಶ್ರೀಮಾನ್ ಕೆ. ವೆಂಕಟರಾಮಪ್ಪನವರನ್ನು ನಾನು ಕೃತಜ್ಞತಾ ಪೂರ್ವಕವಾಗಿ ವಂದಿಸುತ್ತೇನೆ.

ಈ ಗ್ರಂಥವನ್ನು ಅತ್ಯಲ್ಪ ಅವಕಾಶದಲ್ಲಿಯೇ ಅಚ್ಚುಕಟ್ಟಾಗಿ ಮುದ್ರಿಸಿ ಪ್ರಕಟಿಸಲು ನೆರವಾದ ಶ್ರೀ ಸೀತಾರಾಘವ ಮುದ್ರಣಾಲಯದವರಿಗೆ ನನ್ನ ಅಭಿವಂದನೆ.

**ತ. ಸು. ಶಾಮರಾಯ**

ಸಂಪಾದಕ.

# ಅನುಕ್ರಮಣಿಕೆ

# ಶ್ರೀ ಕೃಷ್ಣನ ಕಥೆ

## ೧. ಮೆರವಣಿಗೆ

ಶ್ರೀ ಮಧುರಾ ನಗರದಲ್ಲಿ ಅಂದು ಮಹಾಸಂಭ್ರಮ. ಯದೂತ್ತಮನಾದ ವಸುದೇವನು ದೇವಕಿಯನ್ನು ಮದುವೆಯಾದನು. ಉಗ್ರಸೇನ ಮಹಾರಾಜನು ತನ್ನ ತಮ್ಮನ ಮಗಳ ಮದುವೆಯನ್ನು ಮಹಾ ವೈಭವದಿಂದ ನಡಸಿದನು. ಪುರಜನರು ಬಹಳ ಸಡಗರದಿಂದ ನಗರವನ್ನು ಅಲಂಕರಿಸಿದ್ದರು. ಎಲ್ಲೆಲ್ಲಿಯೂ ನಾಟ್ಯ ಸಂಗೀತಗಳು ನಡೆಯುತ್ತಿದ್ದುವು. ನೆರೆದ ಜನಸಮೂಹ ಉಗ್ರಸೇನನ ಸತ್ಕಾರದಿಂದ ಸಂತುಷ್ಟರಾದರು. ಅಂದು ಮದುಮಕ್ಕಳ ಮೆರವಣಿಗೆ. ಅಮಿತವಾದ ಪರಿವಾರದೊಡನೆ ವಧೂವರರು ರಥಾರೂಢರಾಗಿ ಮಧುರೆಯ ರಾಜ ಬೀದಿಗಳಲ್ಲಿ ಮೆರವಣಿಗೆ, ಹೊರಡಲು ವಾದ್ಯಘೋಷ ದಿಕ್ಕುಗಳನ್ನು ಭೇದಿಸಿತು. ಆ ವೈಭವವನ್ನು ನೋಡಲು ದೇವತೆಗಳು ಅಂತರಿಕ್ಷದಲ್ಲಿ ಸಾಲುಗಟ್ಟಿ ನಿಂತರು.

ಆ ಮಂಗಳ ಮಹೋತ್ಸವದಲ್ಲಿ ಯುವರಾಜ ಕಂಸನು ತಂಗಿಯ ಮೇಲಣ ಮಮತೆಯಿಂದ ಮದುಮಕ್ಕಳ ತೇರಿಗೆ ತಾನೇ ಸಾರಥಿಯಾಗಿದ್ದನು. ಅಮಿತಸಂಭ್ರಮದಿಂದ ಆ ಮೆರವಣಿಗೆ ಮಧುರೆಯ ಮಧ್ಯಪ್ರದೇಶಕ್ಕೆ ಬಂದಾಗ ಮೇಘಸ್ತೋಮವು ಒಟ್ಟಿಗೆ ಮೊಳಗಿದ ಹಾಗೆ ಬಹು ಭೀಕರ ಶಬ್ದವಾಯಿತು ಜನ ಭೀತರಾಗಿ ದಿಕ್ಕು ದಿಕ್ಕುಗಳನ್ನು ನೋಡ ತೊಡಗಿದರು. ಮೆರವಣಿಗೆ ತಾನಾಗಿ ನಿಂತು ಹೋಯಿತು. ವಾದ್ಯನಿನಾದವಡಗಿತು. ಮೌನವು ಆವರಿಸಿಕೊಂಡಿತು. ಆಗ ಯುವರಾಜ ಕಂಸನ ಉತ್ಸಾಹವೆಲ್ಲ ಇಂಗಿಹೋಗುವಂಥ ಒಂದು ಅಶರೀರವಾಣಿ ಕೇಳಿಸಿತು. ''ಎಲವೋ ಖೂಳ ಕಂಸ! ಕೇಳು. ಇಂದು ಯಾರ ಮದುವೆಯೆಂದು ಸಡಗರಪಡುತ್ತಿರುವೆಯೋ ಈ ನಿನ್ನ ತಂಗಿಯ ಎಂಟನೆಯ ಗರ್ಭದಲ್ಲಿ ಪದ್ಮನಾಭನು ಹುಟ್ಟಿ ನಿನ್ನ ತಲೆಯನ್ನು ಮುರಿಯುತ್ತಾನೆ.'' ಇಷ್ಟು ಮಾತನಾಡಿದ ಮೇಲೆ ಆ ನಭೋನಿನದವು ಅಡಗಿಹೋಯಿತು. ತನ್ನ ಮೋಹದ ತಂಗಿಯೇ

ತನ್ನ ಮೃತ್ಯುವನ್ನು ಹೆರುವವಳೆಂದು ತಿಳಿದು ಕಂಸನು ಕಣ್ಗಾಣದಾದನು. ಆ ಮಂಗಳ ಮಹೋತ್ಸವದಲ್ಲಿ ಈ ಅಶರೀರವಾಣಿ ನುಡಿದದ್ದು ಬೆಳೆದು ನಿಂತ ಪೈರಿನ ಮೇಲೆ ಕೆಂಡದ ಮಳೆಗರೆದ ಹಾಗಾಯಿತು. ಕಂಸನು ದೇವಕಿಯು ತನ್ನ ಒಡಲಕೇಡಿನ ಸಿಂಗಿಯೇ ಹೊರತು ತಂಗಿಯಲ್ಲವೆಂದು ಬಗೆದನು. ಅವನ ಮಮತೆ ಮಾಯವಾಗಿ ಅದರ ಸ್ಥಳದಲ್ಲಿ ದ್ವೇಷ ಆವಿರ್ಭವಿಸಿತು. ಅವನು ಕತ್ತಿಯನ್ನು ಹಿರಿದು ದೇವಕಿಯ ಕತ್ತಿಗೆ ಗುರಿಯಿಟ್ಟನು. ಜನ ಭೀತರಾದರು. ಮದುವಣಿಗನಾದ ವಸುದೇವನು ದೇವಕಿಯ ಅನಿರೀಕ್ಷಿತ ವಿಪತ್ತನ್ನು ಕಂಡು ಮರುಗಿ ಕಂಸನಿಗಡ್ಡಬಂದು ಅವನ ಕೂರಸಿಗೆ ಕೈಯೊಡ್ಡಿ ನಿಂತು "ಎಲೆ ವೀರ, ವಿಪುಳ ಪರಾಕ್ರಮಿಯಾದ ನೀನು ನಿರಪರಾಧಿನಿಯಾದ ಈ ನಿನ್ನ ತಂಗಿಯನ್ನು ಕೊಲ್ಲ ಬಯಸಬಹುದೆ? ವೀರರಿಗೆ ಹೆಂಗೊಲೆ ಸಮನಲ್ಲ. ತಂಗಿಗೆ ನೀನು ಕೊಡುವ ಬಳುವಳಿ ಈ ಖಡ್ಗಹತಿಯೆ?" ಎಂದು ಕೇಳಿದನು.

ವಸುದೇವನ ಈ ಮಾತು ಕಂಸನಿಗೆ ಕೇಳಿಸಿದಂತೆ ತೋರಲಿಲ್ಲ. ಆ ನನು ತಂಗಿಯ ಕೊಲೆಯ ಯೋಚನೆಯನ್ನು ಬಿಡಲಿಲ್ಲ. ವಸುದೇವನು ಮತ್ತೆ: "ಎಲೆ ಪಾಪಿ, ನಿನಗೆ ಕರುಣವಿಲ್ಲವೇ? ತಂಗಿಯ ಕೊರಳು ನಡುಗುತ್ತಿರುವುದು ಕಾಣಿಸುವುದಿಲ್ಲವೇ? ಹರಾ ಹರಾ! ಮದುವೆಯಲ್ಲಿ ಇಂಥಾ ವೈಪರೀತ್ಯವನ್ನು ಯಾರು ಊಹಿಸಬಲ್ಲರು? ವೃಥಾ ಬಯಲ ಮಾತಿಗೆ ಬೆರಗಾಗಿ ನೀನು ತಂಗಿಯ ಕೊಲೆ ಮಾಡಿ ನರಕಕ್ಕೆ ಬುತ್ತಿ ಕಟ್ಟಿಕೊಳ್ಳಬೇಕೆ? ಕೊಂದವಗೆ ಕೊಲೆ ತಪ್ಪದು. ಈಗ ಸತ್ತವರು ಮುಂದಿನ ಜನ್ಮದಲ್ಲಿ ನಿನ್ನನ್ನು ಕೊಲ್ಲುವರು. ಮತ್ತೊಂದು ಜನ್ಮಕ್ಕೆ ಪುನಃ ನೀನು ಕೊಲ್ಲುವೆ. ಹೀಗೆ ಹಲವು ಜನ್ಮಾಂತರಕ್ಕೂ ಹಗೆ ಹರಿಯದು. ವೃಥಾ ಪಾತಕಿಯಾಗಬೇಡ. ಕಂಸ, ನಿನ್ನ ತಂಗಿಯನ್ನು ಉಳಿಸು" ಎಂದು ಹಿತೋಪದೇಶ ಮಾಡಿದನು.

ಕೋಪಿಗೆ ಉಪದೇಶ ಹಿಡಿಸೀತೆ? ಕೈಗೆ ಸಿಕ್ಕ ಬೇಟೆಯನ್ನು ಬಿಡಿಸಿಕೊಳ್ಳಲು ಬಂದವನ ಮೇಲೆಯೇ ಬೀಳುವ ದುಷ್ಟ ಮೃಗದಂತೆ ಕಂಸನು ವಸುದೇವನ ಮೇಲೆಯೇ ಬಹಳ ಸಿಟ್ಟುಗೊಂಡನು. "ಈ ಆತ್ಮವಿದ್ಯೆಯನ್ನು ನೀನು ಯಾರಲ್ಲಿ ಕಲಿತೆ? ಅದನ್ನು ಈ ನಿನ್ನ ನಾರಿಗೆ ಉಪದೇಶಿಸು. ದೇಹವು

ನಿತ್ಯವಲ್ಲವೆಂದು ಇವಳಿಗೆ ಹೇಳು. ಇವಳನ್ನು ಕೊಂದರೆ ನನಗೆ ಪಾತಕ ವಿಲ್ಲ'' ಎಂದು ಕಂಸನು ವಸುದೇವನನ್ನು ಗದರಿಸಿ, ತನ್ನ ಕೊಲೆಗೆಲಸಕ್ಕೆ ಅನುವಾದನು. ವಸುದೇವನು ಸುಮ್ಮನಾಗಲಿಲ್ಲ. ''ಅಯ್ಯಾ ನನ್ನನ್ನೇ ಕೊಲ್ಲು. ಈ ಬಾಲಿಕೆಯನ್ನು ಕೊಂದು ಪಾತಕಿಯಾಗಬೇಡ. ಕಾಲಲ್ಲಿ ಮುಳ್ಳು ಮುರಿದರೆ ಯಾರಾದರೂ ಹುಲ್ಲನ್ನು ಸುಡುತ್ತಾರೆಯೇ ? ನಿನ್ನನ್ನು ಕೊಲ್ಲುವುದು ಯಾರು, ತಂಗಿಯೇ ? ತಂಗಿಯ ಮಗುವೆ ? ನೀನು ನನ್ನ ಮಾತನ್ನು ಮನ್ನಿಸಿ ಇವಳನ್ನು ಉಳಿಸುವೆಯಾದರೆ ಇವಳಲ್ಲಿ ಹುಟ್ಟುವ ಮಕ್ಕಳನ್ನು ನಿನಗೇ ಒಪ್ಪಿಸುತ್ತೇನೆ. ವೃಥಾ ಹೆಂಗೊಲೆ ಮಾಡಿ ನಗೆಗೀಡಾ ಗಬೇಡ. ಈ ಸತಿಯು ನಿನಗೆ ಹಗೆಯಲ್ಲ'' ಎಂದು ವಸುದೇವನು ಹೇಳಲು ಕಂಸನು ಕೊಂಚ ಯೋಚನಾಮಗ್ನನಾದನು. ಅವನ ಕೋಪದ ಅಮಲು ಕೊಂಚ ಇಳಿಯಿತು. ಅವನು ಹಿಡಿದಿದ್ದ ದೇವಕಿಯ ಮುಂದಲೆಯನ್ನು ಕೈ ಬಿಟ್ಟನು. ವಸುದೇವನ ಮಾತು ಫಲಿಸಿತು. ದೇವಕಿಯು ಜೀವ ದಿಂದುಳಿದಳು. ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯುಸ್ಸು ! ಸನ್ನಿಹಿತವಾದ ಮೃತ್ಯು ತಪ್ಪಿದರೆ ಸಾಕೆಂದು ವಸುದೇವನ ಯೋಚನೆ.

ಕಂಸನು ಎಲ್ಲರನ್ನೂ ಕಳುಹಿಸಿ ಅರಮನೆಗೆ ಹಿಂತಿರುಗಿದನು. ಮದು ವೆಯ ಮೆರವಣಿಗೆ ಮಧ್ಯದಲ್ಲಿಯೇ ಮುಗಿಯಿತು.

## ೨. ಉಪದೇಶ

ವಸುದೇವ ದೇವಕಿಯರು ಕಂಸನ ಕೋಪದಿಂದ ಪಾರಾಗಿ ತಮ್ಮ ಮನೆ ಸೇರಿದರು. ಕಾಲಕ್ರಮದಲ್ಲಿ, ದೇವಕಿಯು ಪಾಪಕೋಪಮರಾದ ಮಕ್ಕಳನ್ನು, ದಂಡಕ್ಕೆ ಧನವನ್ನು ಗಳಿಸುವವರ ಹಾಗೆ, ಹೆತ್ತಳು. ಮೊದಲಮಗನಾದ ಕೀರ್ತಿಮಾನನನ್ನು ಸತ್ಯಸಂಧನಾದ ವಸುದೇವನು ಮನದಲ್ಲಿ ಮರುಗುತ್ತ ಮೃತ್ಯುವಿಗೆ ಒಪ್ಪಿಸುವಹಾಗೆ ತಂದು ಕಂಸನ ಕೈಗೆ ಒಪ್ಪಿಸಿದನು. ವಸುದೇವನ ಈ ಅನನ್ಯ ಸಾಧಾರಣವಾದ ಮನೋದಾರ್ಢ್ಯ ವನ್ನು ಕಂಡು ಕಂಸನು ಬೆರಗಾದನು ; ಮೆಚ್ಚಿ ತಲೆದೂಗಿದನು. ''ವಸು ದೇವ, ನಿಜವಾಗಿ ನೀನು ದೇವನೇ ಸರಿ. ಅಥವಾ ನೀನು ಆತ್ಮವಿದ್ಯಾ ಕೋವಿದರ ಕುಲದೈವ. ಇಲ್ಲದಿದ್ದರೆ ಈ ಸತ್ಯಾವಲಂಬನ, ಈ ನಿರ್ವ್ಯಾ

ಕುಲತೆ, ಈ ಮನೋದಾರ್ಢ್ಯ, ಇವೆಲ್ಲ ಹೇಗೆ ಲಭಿಸಬೇಕು? ನಿನ್ನ ಸತ್ಯದ ಗಂಡುಗಲಿತನವನ್ನು ನಾನು ಮನಗಂಡೆ. ನಿನ್ನ ಎಂಟನೆಯ ಶಿಶು ನನ್ನ ವೈರಿ. ಉಳಿದ ಏಳು ಮಕ್ಕಳ ಮೇಲೆ ನನಗೇಕೆ ವೈರ? ತಂಗಿಯನ್ನು ವೃಥಾ ಏಕೆ ಅಳಲಿಸಬೇಕು? ಈ ಶಿಶುವು ನನಗೇಕೆ? ತೆಗೆದುಕೊಂಡು ಹೋಗು" ಎಂದು ಕಂಸನು ವಸುದೇವನಿಗೆ ಸಮಾಧಾನ ಹೇಳಿದನು. ವಸುದೇವನು ತನ್ನ ಕಿವಿಗಳನ್ನೇ ನಂಬಲಾರದಾದನು. ಮಹದಾಶ್ಚರ್ಯ! ತಂಗಿಯನ್ನು ಕೊಲ್ಲಲು ಸಿದ್ಧನಾಗಿದ್ದವನು ಈಗ ಈ ಮಗುವನ್ನು ಬಿಟ್ಟಿದ್ದು ವಸುದೇವನಿಗೆ ನಂಬಿಕೆಯಾಗಲಿಲ್ಲ. ಕಂಸನೇ ವಸುದೇವನ ಮನದ ಸಂಶಯುವನ್ನು ಊಹಿಸಿ ಅವನಿಗೆ ಧೈರ್ಯ ಹೇಳಿ ಮನ್ನಿಸಿ ಮಗುವಿನೊಡನೆ ಕಳುಹಿಸಿಕೊಟ್ಟನು. ಅಣ್ಣನ ಈ ಅನುಗ್ರಹಕ್ಕೆ ದೇವಕಿ ಸಂತೋಷಪಟ್ಟಳು.

ಕೆಲವುಕಾಲ ಕಳೆಯಿತು. ದೇವಕಿಗೆ ಆರು ಮಕ್ಕಳಾದವು. ಹೀಗಿರಲು ಒಂದುದಿನ ಸುರನರಮಹೋರಗಬೃಂದವಂದಿತಚರಣನಾದ ನಾರದ ಮಹರ್ಷಿಯು ಮಧುರಾ ನಗರಕ್ಕೆ ಬಂದನು. ಕಂಸನು ಆ ದೇವರ್ಷಿಯನ್ನು ಇದಿರುಗೊಂಡು ಗೌರವಿಸಿ ಕರೆತಂದು ಭದ್ರಾಸನದಲ್ಲಿ ಕುಳ್ಳಿರಿಸಿ ಉಪಚರಿಸಿದನು. ನಾರದನು ಕಂಸನು ಮಾಡಿದ ಸತ್ಕಾರವನ್ನು ಸ್ವೀಕರಿಸಿ "ನಿನಗೆ ಕುಶಲವೆ, ಕಂಸ? ನಿನ್ನ ಬಂಧುಬಾಂಧವರೆಲ್ಲ ಸುಖಿಗಳೆ? ನಿನ್ನ ರಾಜ್ಯ ನಿಷ್ಕಂಟಕವಾಗಿದೆಯೆ?" ಎಂದು ಕುಶಲಪ್ರಶ್ನೆ ಮಾಡಿದನು. ಕಂಸನು ವಿನಯದಿಂದ "ಎಲ್ಲವೂ ತಮ್ಮ ಆಶೀರ್ವಾದ" ಎಂದು ನುಡಿಯಲು, ನಾರದನು "ಕಂಸ, ನಿನ್ನ ವೈರಿಗಳು ಯಾರೆಂಬುವನ್ನು ನೀನರಿಯೆ. ಯಾದವರೆಲ್ಲ ನಿನ್ನ ಶತ್ರುಗಳಾದ ದೇವತೆಗಳು. ಹಿಂದಿನ ಜನ್ಮದಲ್ಲಿ ನೀನು ಕಾಲನೇಮಿಯಾಗಿದ್ದೆ. ನಂದನೇ ಮೊದಲಾದ ಗೋಪರು ಸುರರು. ಯಾದವರಾರೆಂಬುದನ್ನರಿಯದೆ ವೃಥಾ ಸಾಯಬೇಡ. ವಸುದೇವಾದಿಗಳನ್ನೂ ನಂಬಬೇಡ. ಶ್ರೀಪತಿಯು ಮಹಾ ಮಾಯಾವಿ. ಭೂಲೋಕದ ದುಷ್ಟ ಕ್ಷತ್ರಿಯರನ್ನೆಲ್ಲ ಕೊಂದು ಭೂಭಾರವನ್ನು ಹೋಗಲಾಡಿಸಿ ದೇವತೆಗಳನ್ನು ಕಾಪಾಡಬೇಕೆಂಬುದೇ ಅವನ ಉದ್ದೇಶ. ಎಚ್ಚರದಿಂದಿರು, ಶ್ರೀಪತಿಯು ನಿನ್ನನ್ನು ಮರೆಸಿ ಗಂಟಲು ಕೊಯ್ಯುತ್ತಾನೆ." ಎಂದು

ಹೇಳಿ, ನಾರದ ಮಹರ್ಷಿಯು ಆಕಾಶಕ್ಕೆ ಹಾರಿ ಅಂತರ್ಧಾನನಾದನು.

ನಾರದನ ಈ ಉಪದೇಶದಿಂದ ಕಂಸನು ಕೃಷ್ಣಸರ್ಪದಂತೆ ಕೆರಳಿ "ಎಲವೋ, ಆ ಕಳ್ಳ ವಸುದೇವನನ್ನು ಕರೆ. ಕುಲಗೆಡುಕನ ಮಕ್ಕಳನ್ನಿಲ್ಲಿ ತರ ಹೇಳು." ಎಂದು ಕೂಗಾಡಿದನು. ದೇವಕಿಯ ದುಃಖಾತಿಶಯವನ್ನು ನೋಡದೆ ಅವಳ ಆರು ಮಕ್ಕಳನ್ನು ಕಂಸನು ಶಿಲೆಯ ಮೇಲಪ್ಪಳಿಸಿ ಕೊಂದು ಬಿಟ್ಟನು; ದೇವಕಿ ವಸುದೇವರನ್ನು ಸೆರೆಮನೆಗೆ ತಳ್ಳಿಸಿಬಿಟ್ಟನು ! ತನ್ನ ತಂದೆಯಾದ ಉಗ್ರಸೇನನನ್ನೇ ಸೆರೆಯಲ್ಲಿರಿಸಿದ ಕಂಸನಿಗೆ ಉಳಿದವರು ಯಾವ ಲೆಕ್ಕ ? ಕಂಸನು ಯಾದವರನ್ನು ಬಗೆಬಗೆಯಾಗಿ ಪೀಡಿಸತೊಡಗಿದನು; ಅವರ ಗೋಧನವನ್ನು ಅಪಹರಿಸಿದನು. ಇವನ ಕಾಟಕ್ಕೆ ತಾಳಲಾರದೆ ಯಾದವರು ದೇಶತ್ಯಾಗ ಮಾಡಿದರು.

ದೇವಕಿಯ ಆರು ಮಕ್ಕಳು ಯಮನ ಸನ್ನಿಧಿಗೆ ಹೋದ ಮೇಲೆ ಅವಳ ಏಳನೆಯ ಗರ್ಭದಲ್ಲಿ ಧರಣೀಧರನಾದ ಶೇಷಾಂಕನು ಅವತರಿಸಿದನು. ಸಕಲ ಭುವನೇಶ್ವರನಾದ ಮಹಾ ವಿಷ್ಣುವು ಇದನ್ನು ಗಮನಿಸಿ ಶಕ್ತಿದೇವತೆಯಾದ ಮಾಯೆಯನ್ನು ಕರೆದು ದೇವಕಿಗೆ ತಿಳಿಯದ ಹಾಗೆ ಅವಳ ಈ ಗರ್ಭವನ್ನು ಕೊಂಡೊಯ್ದು ವಸುದೇವನ ಇನ್ನೊಬ್ಬ ಹೆಂಡತಿಯಾದ ರೋಹಿಣೀ ದೇವಿಯಲ್ಲಿರಿಸಬೇಕೆಂದು ಆಜ್ಞಾಪಿಸಿದನು; ಬಳಿಕ ತಾನೇ ದೇವಕಿಯ ಹೊಟ್ಟೆಯಲ್ಲಿ ಹುಟ್ಟುವುದಾಗಿಯೂ, ಮಾಯೆಯು ಆ ವೇಳೆಗೆ ನಂದಗೋಪನ ಮಗಳಾಗಿ ಹುಟ್ಟಿರಬೇಕೆಂದೂ ಹೇಳಿದನು. ವಸುದೇವನ ಹೆಂಡಿರು ಕಂಸನ ಕೋಪಕ್ಕೆ ಅಂಜಿ ಹಲವೆಡೆಗಳಿಗೆ ಓಡಿ ಹೋಗಿ ಅವಿತಿಟ್ಟುಕೊಂಡಿದ್ದರು. ಅವರಲ್ಲಿ ಉತ್ತಮಳಾದ ರೋಹಿಣಿಯು ನಂದಗೋಕುಲದಲ್ಲಿದ್ದಳು. ದೇವದೇವನ ಅಪ್ಪಣೆಯ ಪ್ರಕಾರ ಮಾಯಾ ದೇವಿಯು ಮಧುರೆಗೆ ಬಂದು ಸೆರೆಮನೆಯಲ್ಲಿದ್ದ ದೇವಕಿಯ ಗರ್ಭದಿಂದ ಅನಂತನನ್ನು ಎಚ್ಚರದಿಂದೊಯ್ದು ರೋಹಿಣಿಯ ಹೊಟ್ಟೆಯಲ್ಲಿರಿಸಿದಳು. ದೇವಕಿಗೆ ಗರ್ಭಸ್ರಾವವಾಯಿತೆಂದು ಕಂಸಾದಿಗಳು ಭಾವಿಸಿದರು.

ಕಾಲಾಂತರದಲ್ಲಿ ದೇವಕಿಯು ನಿಗಮಪ್ರಕರದ ಶಿರದಂತೆ ಜಗನ್ಮಯನಾದ ಮಹಾ ವಿಷ್ಣುವನ್ನು ಹೊಟ್ಟೆಯಲ್ಲಿ ಧರಿಸಿದಳು. ಆಕೆಯ ಅಪೂರ್ವವಾದ ತೇಜಸ್ಸನ್ನು ಗಮನಿಸಿದ ಕಂಸನು ಗಾಬರಿಯಾದನು. ಪುಂಡರೀ

ಕಾಕ್ಷನು ಆಕೆಯಲ್ಲಿ ನೆಲೆಗೊಂಡಿರಬೇಕೆಂದು ಅವನು ತರ್ಕಿಸಿದನು. "ಇರಿದು ಕೊಲ್ಲೋಣವೆಂದರೆ ತಂಗಿ, ಅಲ್ಲದೆ ಗರ್ಭಿಣಿ. ಇವಳನ್ನು ಈಗ ಕೊಂದರೆ ನೆಲ ನನ್ನನ್ನು ಹೊರುವುದಿಲ್ಲ. ಕೊಲ್ಲದೆ ಬಿಟ್ಟೆನಾದರೆ ಮಾಯಾವಿಯಾದ ವಿಷ್ಣುವು ಹುಟ್ಟಿದ ಮೇಲೆ ಕೈಗೆ ಸಿಕ್ಕುವನೋ ಇಲ್ಲವೊ ?" ಎಂದು ಕಂಸನು ದೊಡ್ಡ ಯೋಚನೆಯಲ್ಲಿ ಮುಳುಗಿ ತಾನೇ ಸೆರೆಮನೆಯಲ್ಲಿದ್ದರೆ ಹೇಗೋ ಹಾಗೆ ಬಹಳ ಕಷ್ಟದಿಂದ ಹೊತ್ತು ಕಳೆಯುತ್ತಿದ್ದನು. ಹಗಲಿರುಳೂ ಕಂಸ ನಿಗೆ ಅದೊಂದೇ ಯೋಚನೆಯಾಯಿತು. ಊಟಮಾಡುವಾಗ, ಪವಡಿಸು ವಾಗ, ಉಡುವಾಗ, ನಡೆವಾಗ, ನುಡಿವಾಗ, ಎಲ್ಲ ಸಮಯಗಳಲ್ಲೂ ಕಂಸನು ಯೋಗಿಗಳಂತೆ ಭೋಗಿಶಯನನನ್ನೇ ಕುರಿತು ಯೋಚಿಸುತ್ತಿದ್ದನು !

ಹೀಗಿರಲು ವಿಷ್ಣುವಿಗೆ ಒಂಬತ್ತು ತಿಂಗಳ ಗರ್ಭವಾಸ ಕಳೆಯಿತು. ಪುಣ್ಯಗ್ರಹನಿಕರ ಸೇರಿರುವಾಗ ಶ್ರಾವಣ ಬಹುಳ ಅಷ್ಟಮಿಯ ದಿನ ರೋಹಿಣೀನಕ್ಷತ್ರದಲ್ಲಿ ದೇವಕಿಯು ಗಂಡುಮಗುವನ್ನು ಹೆತ್ತಳು. ಆಕಾಶ ದಲ್ಲಿ ದೇವತೆಗಳು ಆನಂದದಿಂದ ಕುಣಿದಾಡಿದರು. ಧರೆಯ ಮೇಲೆ ಉತ್ಸವ ಪರಂಪರೆಯಾಯಿತು. ದುಂಬಿ, ಕೋಗಿಲೆ, ಗಿಳಿವಿಂಡುಗಳ ಹರ್ಷೋತ್ಕರ್ಷದ ಸಂಗೀತವು ಎಂಟು ದಿಕ್ಕುಗಳನ್ನೂ ತುಂಬಿತು. ತಂಗಾಳಿ ಸುಳಿದಾಡಿತು. ಕೃಷ್ಣಾವತಾರ ಮುಹೂರ್ತದಲ್ಲಿ ಲೋಕ ನಲಿದಾಡಿತು.

ಹಾರ, ಕುಂಡಲ ಕೌಸ್ತುಭ ಮುಂತಾದ ಆಭರಣಗಳನ್ನು ಧರಿಸಿದ ಚತುರ್ಭುಜನಾದ ಶಿಶುವನ್ನು ಕಂಡು ವಸುದೇವನು ಬೆರಗಾದನು. ಸಾಕ್ಷಾತ್ ಮುರಹರನ ಅಂಗಲಕ್ಷ್ಮಿಯನ್ನು ನೋಡುತ್ತ ಆ ಯದುಪುಂಗವನು ಪುಳ ಕಾವಳಿಯಲ್ಲಿ ಮುಳುಗಿದನು. ಆನಂದದಿಂದ ಮೈಯುಬ್ಬಿ " ಈ ಸೆರೆಯನ್ನು ಪಾಟಿ ಈ ಶಿಶುರತ್ನವನ್ನುಳಿಸಿಕೊಂಡೆನಾದರೆ ವಿಪ್ರೋತ್ತಮರಿಗೆ ಹತ್ತು ಸಹಸ್ರ ಗೋವುಗಳನ್ನು ದಾನಮಾಡುತ್ತೇನೆ." ಎಂದು ಸಂಕಲ್ಪಿಸುತ್ತ ವಸುದೇವನು ಶಿಶುರೂಪದ ಪುರುಷೋತ್ತಮನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ " ದೇವ ದೇವ, ಭೂಭಾರವನ್ನು ಕಳೆಯಲು ನನ್ನ ಮನೆಯಲ್ಲಿ ಮೈ ದೋರಿ ನನ್ನನ್ನು ಉದ್ಧರಿಸಿದೆ. ನೀನು ಕರುಣಾಜಲಧಿ. ನೀನು ನನಗೆ ಶಿಶುವಾಗಿ ಹುಟ್ಟುವೆಯೆಂದು ಕೇಳಿ ಕಡುಪಾಪಿ ಕಂಸನು ನಿನ್ನ ಅಣ್ಣಂದಿರ ನ್ನೆಲ್ಲ ಕೊಂದನು. ಇನ್ನು ನಿನ್ನ ಜನನ ವೃತ್ತಾಂತವನ್ನು ಕೇಳಿದರೆ ಅವನು

ಬರದೆ ಇರುತ್ತಾನೆಯೆ ? ” ಎಂದು ಬಿನ್ನವಿಸಿಕೊಂಡನು.

ವಸುದೇವನು ಶಿಶುರೂಪಿಯಾದ ದೇವದೇವನ ಪಾದಗಳಿಗೆರಗಿರಲು ದೇವಕಿಯು ಪರಮೇಶ್ವರನೇ ತನಗೆ ಸುತನಾಗಿರುವುದನ್ನು ಕಂಡು ಮಹಾ ಸಂಭ್ರಮದಿಂದ “ ಮೃತ್ಯುಭಯ ಭಂಜನನೆ, ನನ್ನ ಬಿನ್ನಹವನ್ನು ಚಿತ್ತವಿಸು. ಅತಿಶಯ ಪಾಪಚೇಷ್ಟಿತನಾದ ಈ ಬಂಧುದ್ರೋಹಿ ಕಂಸನು ನನ್ನ ಭಾಗದ ಮೃತ್ಯುವಾಗಿದ್ದಾನೆ. ಪುತ್ರ ಶೋಕಾತುರೆಯಾದ ನನ್ನನ್ನು ನೀನು ರಕ್ಷಿಸಬೇಕು. ” ಎಂದು ಬೇಡಿಕೊಂಡಳು. ಆಗ ಅಸು ರಾರಿಯು “ ನಂದಗೋಪನ ಹೆಂಡತಿಯು ಒಂದು ಹೆಣ್ಣು ಮಗುವನು ಹೆತ್ತಿದ್ದಾಳೆ. ಅದು ಮಾಯೆಯ ಅವತಾರ. ಆ ಮ ಗ ಳ ನ್ನು ಇಲ್ಲಿಗೆ ತಂದು ನನ್ನನ್ನು ಗೋಕುಲದಲ್ಲಿರಿಸಿ ಬನ್ನಿ. ರೋಹಿಣೀ ದೇವಿಯಲ್ಲಿ ನನ ಗೊಬ್ಬ ಅಣ್ಣನು ಹುಟ್ಟಿದ್ದಾನೆ. ಅದನ್ನು ನೀವು ಅರಿತಿರಬೇಕು.” ಎಂದು ಹೇಳಿ ನರಶಿಶುತನವನ್ನು ಕೈಕೊಂಡನು.

ಇನ್ನು ಕಂಸನ ಅನುಚರರಿಗೆ ತಿಳಿಯದ ಹಾಗೆ ಈ ಮಗುವನ್ನು ಕರೆ ದೊಯ್ಯುವ ಮಾರ್ಗವಾವುದೆಂದು ಯೋಚಿಸುತ್ತ ವಸುದೇವನು ಅಂಜು ತ್ತಂಜುತ್ತ ಶಿಶುವನ್ನೆತ್ತಿಕೊಂಡನು. ಆ ಕೂಡಲೆ ಅವನ ಕಾಲಿಗೆ ಹಾಕಿದ್ದ ದೊಡ್ಡ ಸಂಕೋಲೆ ಕಿತ್ತುಹೋಯಿತು ! ಆ ಸೆರೆಮನೆಯ ಕಾವಲುಗಾರರು ನಿದ್ರೆಯಲ್ಲಿ ಮೈಮರೆತಿದ್ದರು. ದೊಡ್ಡ ಬಾಗಿಲು ಸದ್ದಿಲ್ಲದೆ ತೆರೆಯಿತು. ವಸುದೇವನು ಮಗುವನ್ನೆತ್ತಿಕೊಂಡು ನಡುರಾತ್ರಿಯಲ್ಲಿ ಸೆರೆಮನೆಯಿಂದ ಹೊರಟನು. ಅಷ್ಟಸಿದ್ಧಿಗಳೊಡೆಯನನ್ನು ತನ್ನ ಮಡಿಲೊಳಗಿಟ್ಟುಕೊಂಡು ಉಟ್ಟ ಧೋತ್ರದ ನೆರಗನ್ನೇ ಮಗುವಿಗೆ ಹೊದಿಸಿ ವಸುದೇವನು ಮೆಲ್ಲ ಮೆಲ್ಲಗೆ ಬಾಗಿಲನ್ನು ದಾಟಿದನು. ಈ ಅದ್ಭುತವನ್ನು ಕಂಡು ದೇವಕಿ ಬೆರಗಾದಳು.

ಶಿಶುರೂಪಿಯಾದ ದೇವಾಧಿದೇವನನ್ನು ಎದೆಗಪ್ಪಿಕೊಂಡು ವಸು ದೇವನು ಸೆರೆಮನೆಯಿಂದ ಹೊರಟು ಬರಲು, ಮುಂದೆ ದಾರಿ ಕಾಣದಷ್ಟು ಕಗ್ಗತ್ತಲೆ ತುಂಬಿತ್ತು. ಮೇಲೆ ಮಳೆ ಸುರಿಯತೊಡಗಿತು. ವಸುದೇವ ನಿಗೆ ದಾರಿತೋರದಂತಾಯಿತು. ಇದನ್ನೆಲ್ಲ ತಿಳಿದ ಆದಿಶೇಷನು ಕೂಡಲೆ ಸ್ವಾಮಿಯ ಸನ್ನಿಧಿಗೆ ಬಂದು ತನ್ನ ಹೆಡೆಗಳನ್ನು ವಸುದೇವನಿಗೆ ಕೊಡೆ

ಯಾಗಿಸಿದನು. ಅವನ ಹೆಡೆಯ ಮಣಿಗಳ ಕಾಂತಿಯೇ ವಸುದೇವನಿಗೆ ದಾರಿದೋರುವ ಕೈದೀವಿಗೆಯಾಯಿತು. ಸಕಲ ಲೋಕಾಧೀಶನನ್ನೆತ್ತಿ ಕೊಂಡಿದ್ದ ವಸುದೇವನು ಸುಖವಾಗಿ ದಾರಿ ನಡೆದನು. ಮುಂದೆ ಯಮುನೆಯು ದೊಡ್ಡ ಸಮುದ್ರದಂತೆ ಗರ್ಜಿಸುತ್ತಾ ಮುಗಿಲನ್ನು ಮುಟ್ಟು ವಂಥ ದೊಡ್ಡ ಅಲೆಗಳಿಂದ ಕೂಡಿ ಮಹೋಗ್ರಳಾಗಿ ಹರಿಯುತ್ತಿದ್ದಳು. ಅದನ್ನು ಕಂಡು ವಸುದೇವನು ಅಂಜಿದನಾದರೂ ದೈವಕೃಪೆಯಿದ್ದಂತಾಗಲೆಂದು ಬಗೆದು ನೀರಿಗಿಳಿದನು. ಅವನು ಹೆಜ್ಜೆಯಿಟ್ಟಂತೆಲ್ಲ ಯಮುನೆಯು ಅಂಜಿ ಹಿಂದೆ ಶ್ರೀರಾಮನಿಗೆ ಸಮುದ್ರವು ದಾರಿಬಿಟ್ಟಂತೆ ದಾರಿಬಿಟ್ಟಳು. ವಸು ದೇವನು ಯಮುನೆಯನ್ನು ದಾಟಿ ನಟ್ಟಿರುಳು ನಂದಗೋಕುಲವನ್ನು ಹೊಕ್ಕು, ಪ್ರಸವವೇದನೆಯಿಂದ ಮೈಮರೆತು ಮಲಗಿದ್ದ ಯಶೋದೆಯ ಪಕ್ಕದಲ್ಲಿ ಮಹಾವಿಷ್ಣುವನ್ನು ಇರಿಸಿ, ನಂದನ ಪುತ್ರಿಯಾದ ಮಾಯೆಯನ್ನೆತ್ತಿಕೊಂಡು ಯಾರಿಗೂ ತಿಳಿಯದಂತೆ ಬೇಗಬೇಗನೆ ಮಧುರಾಪುರಿಗೆ ಮರಳಿದನು.

## ೩. ಕಂಸನ ಪಶ್ಚಾತ್ತಾಪ

ವಸುದೇವನು ಹಿಂತಿರುಗಿ ಬಂದಮೇಲೆ ಯಮುನಾನದಿಯು ಮತ್ತೆ ಮೊದಲಿನಂತೆ ದುಸ್ತರವಾಯಿತು. ಸೆರೆಮನೆಯ ಬಾಗಿಲುಗಳು ಮತ್ತೆ ಭದ್ರವಾಗಿ ಕಚ್ಚಿಕೊಂಡವು. ವಸುದೇವನ ಕಾಲಿಗೆ ಸಂಕೋಲೆ ತಾನಾಗಿ ಬಂದು ಬಿದ್ದಿತು. ಮೈಮರೆತು ಮಲಗಿ ನಿದ್ರಿಸುತ್ತಿದ್ದ ಕಾವಲುಗಾರರು ಮಗುವಿನ ಅಳುವಿನಿಂದ ಎಚ್ಚತ್ತು ಕಣ್ಣುಹೊಸಕಿಕೊಳ್ಳುತ್ತ ಓಡಿಹೋಗಿ ಕಂಸನಿಗೆ ಸುದ್ದಿ ಹೇಳಿದರು. ಸುದ್ದಿಕೇಳುತ್ತಲೇ ದುರುಳ ಕಂಸನು ಬೀಳುವುದೇಳುವುದನ್ನು ಕಾಣದೆ ಸೆರೆಮನೆಯ ಬಳಿಗೆ ಓಡಿದನು. ತನ್ನ ಗಂಟಲನ್ನು ಮುರಿವ ಮೃತ್ಯುವನ್ನು ಮೊಳಕೆಯಲ್ಲಿಯೇ ಮುರಿವ ಸಂಕಲ್ಪ ಕಂಸನದು. ಅಶರೀರವಾಣಿಯನ್ನು ಸ್ಮರಿಸಿಕೊಂಡು ಅಡಿಗಡಿಗೆ ನಡುಗಿ ಹೋಗುತ್ತ ಕಂಸನು ಸೆರೆಮನೆಯಲ್ಲಿನ ಸೂತಿಕಾ ಗೃಹವನ್ನು ಹೊಕ್ಕನು. ದೇವಕಿಯ ಕಣ್ಣುಗಳಿಗೆ ಅವನು ಯಮನಂತೆ ಕಾಣಿಸುತ್ತಿದ್ದನು. ಅವಳು ದೈನ್ಯದಿಂದ ಮೊರೆಯಿಟ್ಟಳು. "ಅಣ್ಣಾ, ಇದು ಹೆಣ್ಣು ಹಸುಳೆ. ಇದು ನಿನ್ನನ್ನೇನು ತಾನೆ ಮಾಡೀತು? ಇದೊಂದು ಕೂಸನ್ನಾದರೂ ನನಗೆ

ಉಳಿಸು. ಈ ನಿನ್ನ ಸೊಸೆಯನ್ನು ಕೊಲ್ಲಬೇಡ. ಕರುಣಿಸು" ದೇವ ಕಿಯು ಹೀಗೆ ಹೇಳುತ್ತ ಮಗಳನ್ನು ತಕ್ಕೈಸಿಕೊಂಡು ಕಂಸನ ಕಾಲು ಗಳನ್ನು ಕಣ್ಣೀರಿನಲ್ಲಿ ತೊಳೆದಳು. ಆದರೇನು? ದೇವಕಿಯ ಗೋಳು ಕಂಸನ ಕಲ್ಲುಮನವನ್ನು ಕರಗಿಸಲಾರದೆ ಹೋಯಿತು. ಅವನು ಅಂತ ಕನ ದೂತನಂತೆ ನಿರ್ದಯನಾಗಿ ತಾಯಿಯ ಮಡಿಲಿನಲ್ಲಿದ್ದ ಮಗುವನ್ನು ಕಸಿದುಕೊಂಡು ದೇವಕಿಯನ್ನತ್ತ ತಳ್ಳಿ ಹೊರಗೆ ಬಂದು ಆ ಹಸುಳೆಯ ಎರಡು ಕಾಲನ್ನೂ ಹಿಡಿದು ಮೇಲಕ್ಕೆತ್ತಿದನು. ಆ ಹಸುಳೆ ಹಾಗೆಯೇ ನಭಕ್ಕೆ ಹಾರಿತು! ಕಂಸನು ಚಕಿತನಾಗಿ ದಿಕ್ಕೆಟ್ಟು ನೋಡುತ್ತ ನಿಂತು ಕೊಂಡನು. ಅಂತರಿಕ್ಷದಲ್ಲಿ, ಸಣ್ಣ ಶಿಶುವಿಗೆ ಪ್ರತಿಯಾಗಿ ಗದಾಪಾಶಾಂ ಕುಶ ಧಾರಿಣಿಯಾದ ಶಕ್ತಿ ದೇವತೆಯು ಕಾಣಿಸಿಕೊಂಡು "ಎಲವೋ, ಕಂಸ, ನನ್ನನ್ನು ನೀನು ಕೊಲ್ಲಬಲ್ಲೆಯಾ? ನಾನು ನಿನಗೆ ಗಂಟ ಲಲ್ಲಿಳಿವ ತುತ್ತೆ? ಪಾಪಿ, ನಿನ್ನನ್ನು ಕೊಲ್ಲುವ ಕಾಲಾತ್ಮಕನು ಧರೆಯ ಬೇರೊಂದೆಡೆಯಲ್ಲಿ ಬೆಳೆಯುತ್ತಿದ್ದಾನೆ. ಬೇಗನೆ ಬಂದು ನಿನ್ನ ಕೊರಳು ಮುರಿಯುತ್ತಾನೆ" ಎಂದು ಹೇಳಿ ಅಂತರ್ಧಾನಳಾದಳು.

ಚಂಡಿಯ ಮಾತು ಕೇಳಿದ ಕಂಸನಿಗೆ ತಲೆ ಹೊಡೆದಹಾಗಾಯಿತು. ಅವನು ಬಹಳ ನೊಂದನು. "ಅಯ್ಯೋ, ದೈವವು ನನ್ನನ್ನು ಬಯಲಮಾತಿ ನಿಂದ ಭಂಗಪಡಿಸಿತೆ? ತಂಗಿಯನ್ನು ವೃಥಾ ಸಂಕಟಪಡಿಸಿದೆನಲ್ಲಾ! ಹಸುಳೆಗಳ ಕೊಲೆಮಾಡಿ ಪಾತಕಿಯಾದೆನೆ?" ಎಂದು ಸಂಕಟಪಟ್ಟನು. ಅವನಿಗೆ ಹಿಡಿಸಲಾರದಷ್ಟು ದುಃಖವಾಯಿತು. ದಿಕ್ಕು ತೋರದೆ ಅವನು ವಸುದೇವ ದೇವಕಿಯರನ್ನು ಸೆರೆಯಿಂದ ಬಿಡಿಸಿ ಅವರ ಕಾಲಿಗೆ ಬಿದ್ದು "ನೀವು ದೇವತಾಂಶಿಗಳು. ಪಾಪಕರ್ಮಿಯಾದ ನನ್ನಿಂದ ಮಕ್ಕಳನ್ನು ಕಳೆದು ಕೊಂಡಿರಿ. ಎಲೆ ತಾಯಿ ದೇವಕಿ! ನಾನು ಸೋದರನ ರೂಪದ ಅಂತಕ ನಾದೆ; ಬಯಲಮಾತನ್ನು ನಂಬಿ ಭೀಕರಕೃತ್ಯವನ್ನು ಮಾಡಿದೆ. ಮೂಢನಾದ ನನ್ನನ್ನು ಮನ್ನಿಸು" ಎಂದು ಹಲತೆರನಾಗಿ ಹಂಬಲಿಸಿ ಗೋಳಿ ಟ್ಟನು. ಅವನ ಸಂಕಟವನ್ನು ನೋಡಿ ವಸುದೇವನಿಗೇ ಕರುಣೆಯುಂಟಾ ಯಿತು. "ಅಣ್ಣ, ಇದೆಲ್ಲ ದೈವಾಧೀನ. ದೇಹಿಗಳಿಗೆಲ್ಲ ಸುಖ ದುಃಖಾ ನುಭವ ತಪ್ಪಿದ್ದಲ್ಲ. ಇದಕ್ಕೆ ನಾವೇಕೆ ಮರುಗಬೇಕು? ಈ ಚರಾಚರ

ಜಗತ್ತಿನ ಸಮಸ್ತ ಭೂತನಿಕರದ ವ್ಯಾಪಾರಗಳಿಗೆಲ್ಲ ಭಗವಂತನೊಬ್ಬನೇ ಸೂತ್ರಧಾರ. ನಾವೆಲ್ಲ ಅವನ ಕೈಗೊಂಬೆಗಳು. ಕೊಲ್ಲುವುದಕ್ಕಾಗಲಿ, ನರುಗುವುದಕ್ಕಾಗಲಿ, ನೀನಾರು? ನಾನು ನಿನ್ನ ಅಪರಾಧವನ್ನು ಮರೆತೆನು" ಎಂದು ಆತನು ಕಂಸನಿಗೆ ಸಮಾಧಾನ ಹೇಳಿದನು. ದೇವಕಿಯೂ ಅಣ್ಣನ ಸಂಕಟವನ್ನು ಕಂಡು ಮರುಗಿದಳು. ಕಂಸನು ಅವರನ್ನು ಮನ್ನಿಸಿ ಬೀಳ್ಕೊಂಡು ತನ್ನ ಅರಮನೆಗೆ ಮರಳಿದನು.

ತಂಗಿಗೆ ತನ್ನಿಂದಾದ ಮಹಾ ಸಂಕಟವನ್ನು ನೆನೆದು ಕಂಸನು ಮರುಗಿದನಾದರೂ ಚಂಡಿಕೆಯು ನುಡಿದ ಮಾತುಗಳನ್ನು ನೆನೆಸಿಕೊಂಡು ತನ್ನ ವೈರಿಯಾದ ವಿಷ್ಣುವು ಬೆಳೆಯುತ್ತಿರುವ ಸ್ಥಳವನ್ನು ಕಂಡು ಹಿಡಿದು ಅವನನ್ನು ಕೊಲ್ಲಿಸಬೇಕೆಂಬ ಯೋಚನೆಯನ್ನು ಮಾತ್ರ ಬಿಡಲಿಲ್ಲ. ಅರಮನೆಯಲ್ಲಿ ಅವನು ತನ್ನ ಆಪ್ತರನ್ನೆಲ್ಲ ಕರೆದು ಮುಂದಿನ ಕರ್ತವ್ಯವನ್ನು ಕುರಿತು ಮಂತ್ರಾಲೋಚನೆ ಮಾಡಿದನು. " ದೇವತೆಗಳು ಸುಳ್ಳಾಡುವವರೆಂಬುದು ಪ್ರಸಿದ್ಧವಾದ ವಿಷಯ. ನನ್ನ ತಂಗಿಯ ಮದುವೆಯಲ್ಲಿ ನುಡಿದ ಅಶರೀರ ವಾಣಿಯನ್ನು ನೀವೆಲ್ಲ ಕೇಳಿದಿರಲ್ಲವೆ? ನನ್ನ ತಂಗಿಯ ಎಂಟನೆಯ ಮಗು ಹೆಣ್ಣು. ಅದೂ ನಮ್ಮೆದುರಿಗೇ ಗಗನಕ್ಕೆ ಹಾರಿಹೋಗುತ್ತ ನನ್ನ ಕೊಲೆಗಾರನು ಬೇರೆಡೆಯಲ್ಲಿ ಹುಟ್ಟಿರುವನೆಂದು ಹೇಳಿತು. ದೈವದ ಮಾತು ಸುಳ್ಳಾಯಿತು ; ನನ್ನ ತಂಗಿಯ ಹೊಟ್ಟೆಯಲ್ಲಿ ನನ್ನ ವೈರಿ ಹುಟ್ಟಲಿಲ್ಲ." ಎಂದು ಕಂಸನು ದೈ ವ ದೂ ಷ ಣೆ ಮಾಡಿದನು. ಅವನ ಮಂತ್ರಿಗಳು " ಜೀಯಾ, ಅಮರರು ನಮ್ಮ ವಿಷಯದಲ್ಲಿ ಯಾವಾಗಲೂ ಕುಹಕಿಗಳೇ. ಅವರು ನಮಗೆ ಕೇಡು ಬಗೆಯದೆ ಇರುವುದಿಲ್ಲ. ನಾವು ಆ ದುರ್ಮಂತ್ರ ಕೋವಿದರನ್ನು ಧ್ವಂಸ ಮಾಡುತ್ತೇವೆ. ನಮಗೆ ಆಜ್ಞೆಯನ್ನು ಕೊಡಿ. ದೇವತೆಗಳು ನಮ್ಮನ್ನೇನು ಮಾಡಬಲ್ಲರು ? ಅವರು ನಿಜಗೃಹ ಶೂರರು. ದೈತ್ಯಾರಿಯೆಂದು ಹೊಗಳಿಕೊಳ್ಳುವ ಶ್ರೀಹರಿಯು ಅಗೋಚರನಾಗಿ ತಪ್ಪಿಸಿಕೊಂಡು ಬದುಕಿದ್ದಾನೆ ; ಕಡಲ ನಡುವೆ ಮನೆಮಾಡಿಕೊಂಡು ಕಾಲ ತಳ್ಳುತ್ತಿದ್ದಾನೆ. ಆ ಮಾರರಿಪುವು ಮರುಳೊಡೆಯನಾಗಿ ಕಾಡು ಹೊಕ್ಕಿದ್ದಾನೆ. ಆ ಬ್ರಹ್ಮನಾದರೋ ಅಹಿಂಸೆಯೇ ಆಚಾರವಾಗಿ ಉಳ್ಳವನು. ನಾವು ಯಾರೊಡನೆ ಕಾಳಗ ಮಾಡೋಣ ? " ಎಂದು ಕೂಗಾಡಿ ಪ್ರತಾಪ

ಹೇಳಿಕೊಂಡರು

ಆಗ ಆಸ್ಥಾನದ ಹಿರಿಯರು ಅವರ ಉಬ್ಬಟೆಯ ಮಾತುಗಳನ್ನು ನಿಲ್ಲಿಸಿ "ಇದು ರಾಜನೀತಿಯಲ್ಲ. ಶತ್ರುಗಳು ದುರ್ಬಲರೆಂದೂ ಹೇಡಿಗಳೆಂದೂ ಭಾವಿಸಿ ಸುಮ್ಮನಿರಬಾರದು. ಸುರರು ಬಲಹೀನರಾದರೂ ನಮಗೆ ಶತ್ರುಗಳು. ರೋಗ, ಸಾಲ, ಶತ್ರುಗಳನ್ನು ಆಯಾ ಕಾಲದಲ್ಲಿಯೇ ಮೂಲೋನ್ಮೂಲನ ಮಾಡದೆ ಬಿಟ್ಟರೆ ಮುಂದೆ ಕೆಡುಕು ತಪ್ಪುವುದಿಲ್ಲ. ಆದ್ದರಿಂದ ಸರ್ವ ಪ್ರಯತ್ನಗಳಿಂದಲೂ ಈಗ ನಾವು ನಮ್ಮ ವೈರಿಯನ್ನು ಕಂಡುಹಿಡಿದು ಕೊಲ್ಲಬೇಕು. ಅಮರರಿಗೆಲ್ಲ ವಿಷ್ಣುವೇ ಮೂಲ. ಆ ವಿಷ್ಣುವಿಗೆ ವಿಪ್ರರು ಮೂಲಾಧಾರ. ಅವರಿಗೆ ವೇದ ಧರ್ಮ ತಪೋವ್ರತಾದಿಗಳೇ ಮುಖ್ಯ. ಆದ್ದರಿಂದ ನಾವು ನಾಡಿನಲ್ಲೆಲ್ಲ ಸಂಚರಿಸಿ ಶೀಲವಂತರಾದ ವಿಪ್ರರನ್ನು ಆರಿಸಿ ಕೊಲ್ಲುವುದೇ ರಿಪುವಧೆಗೆ ಮಾರ್ಗ. ತ್ರಿದಶಕುಲವಿನಾಶಕ್ಕೆ ಇದೊಂದೇ ಮಾರ್ಗ. ನಾವು ಈ ನೃಪನೀತಿಯನ್ನು ಅನುಸರಿಸಿದರೆ ವಿಷ್ಣು ರುದ್ರ ಬ್ರಹ್ಮರಾರೂ ಉಳಿಯುವುದಿಲ್ಲ. ಮರದ ಬುಡ ಕಡಿದರೆ ಕೊಂಬೆಗಳು ಬದುಕುವುವೇ ?" ಎಂದು ವಿವೇಕ ಹೇಳಿದರು. ಹಿರಿಯ ಮಂತ್ರಿಗಳ ಈ ಮಾತುಗಳನ್ನು ಕೇಳಿ ಕಂಸನಿಗೆ ಸಂತೋಷವಾಯಿತು. "ಅದೇ ಲೇಸು ನನ್ನ ಮನಸ್ಸಿನಲ್ಲಿದ್ದುದನ್ನೇ ನೀವೂ ಹೇಳಿದಿರಿ" ಎಂದು ಹೇಳಿ ಅವನು ಎಲ್ಲರನ್ನೂ ಬೀಳ್ಕೊಟ್ಟು ಕದನಪ್ರಿಯರಾದ ದನುಜರನ್ನು ಗೋವಿಪ್ರರ ವಧೆಗೆ ನಿಯಮಿಸಿ ಅಂತಃಪುರವನ್ನು ಹೊಕ್ಕನು. ವಿಷಮತಿಗಳಾದ ಆ ರಕ್ಕಸರು ನಾಡಿನಲ್ಲೆಲ್ಲ ವ್ಯಾಪಿಸಿ ಶಿಶು-ಪಶು ದ್ವಿಜ ಹತ್ಯೆಯನ್ನು ನಡೆಸತೊಡಗಿದರು. ಕಾಲಪಾಶಪರೀತರಾದ ಕಂಸಾದ್ಯರಿಗೆ ಈ ಕೃತ್ಯಗಳಿಂದ ತಮಗೆ ಕೇಡಾದೀತೆಂಬುದು ಹೊಳೆಯಲೇ ಇಲ್ಲ.

## ೪. ನಂದಗೋಕುಲ

ನಂದಗೋಪನ ಸೌಭಾಗ್ಯ ಅತಿಶಯವಾದದ್ದು. ನಿಗಮಗೋಚರನಾದ ಮಹಾವಿಷ್ಣುವೇ ಅವನಿಗೆ ಶಿಶುವಾಗಿ ಗೋಚರಿಸಿದನು. ತನಗೆ ಮಗನು ಹುಟ್ಟಿದನೆಂಬ ಸಂಭ್ರಮದಿಂದ ನಂದನು ಆ ನಟ್ಟಿರುಳಿನಲ್ಲಿಯೇ ಜೋಯಿಸರನ್ನು ಕರೆಸಿ ಜಾತಕರ್ಮ ನಡೆಸಿದನು ; ಮಿಂದು ಮಡಿಯುಟ್ಟು

ಪರಿಜನ ಸಮೇತನಾಗಿ ವಿಪ್ರರನ್ನಾರಾಧಿಸಿದನು. ನೆರೆಹೊರೆಯ ಗೋಪರು ಬಂದು ನಂದನ ಮನೆಯಲ್ಲಿ ಸೇರಿ ಕಮಲಲೋಚನನನ್ನು ಕಂಡು ಸಂತೋಷ ಪಟ್ಟರು. ಶಿಶುಜನನದ ಸುದ್ದಿ ಕೇಳಿದ ಕೂಡಲೆ ಗೋಪಿಯರು ಹೊನ್ನೋಲೆ ಕಡಗಗಳನ್ನು ತೊಟ್ಟು ದಿವ್ಯಾಂಬರಗಳನ್ನುಟ್ಟು ನಂದಾಲಯವನ್ನು ಸೇರಿದರು. ಯಶೋದೆಯ ಕಂದನನ್ನು ನೋಡಿ ಗೋಪಿಯರು ಸೇಸೆದಳಿದು "ನಮ್ಮೆಲ್ಲರನ್ನು ರಕ್ಷಿಸುವ ಆಳ್ಳನಾಗು" ಎಂದು ಹರಸಿದರು. ಬಳಿಕ ಸಂತೋಷಾತಿಶಯದಿಂದ ಆ ಲಲನೆಯರು ಕದಡರಿಶಿನ ಮತ್ತು ನವನೀತಗಳಿಂದ ಕೂಡಿದ ಓಕುಳಿಯನ್ನು ಚೆಲ್ಲಾಡಿದರು. ನಂದನ ಅಜ್ಞೆಯಂತೆ ಅಂದು ರೋಹಿಣಿಯು ತನ್ನ ಕಂದಗೊಡನೆ ಬಂದು ಉತ್ಸವದಲ್ಲಿ ಸೇರಿದಳು. ಅಂದು ಮೊದಲು ಅಖಿಲೇಶ್ವರನ ಸನ್ನಿಧಿಯ ಮಹಿಮೆಯಿಂದ ಗೋಕುಲದಲ್ಲಿ ಉತ್ಸವ ಪರಂಪರೆ ನಡೆಯಿತು.

ತರುವಾಯ ನಂದನು ಗೋಕುಲದ ರಕ್ಷಣೆಗೆ ತಕ್ಕವರನ್ನು ನಿಯಮಿಸಿ ಹಾಲು ಬೆಣ್ಣೆಗಳನ್ನು ತೆಗೆದುಕೊಂಡು ಮಧುರಾನಗರಕ್ಕೆ ನಡೆತಂದು ಕಂಸನನ್ನು ಕಂಡು ತಾನು ಸಲ್ಲಿಸಬೇಕಾದ ವರುಷವರ್ತನೆಯ ಧನವನ್ನು ಒಪ್ಪಿಸಿ ಕಾಣಿಕೆಯನ್ನು ಕೊಟ್ಟು ತನ್ನ ಪುತ್ರೋತ್ಸವದ ಸುದ್ದಿಯನ್ನು ಹೇಳಿದನು. ಇತ್ತ ವಸುದೇವನು ನಂದನು ಬಂದ ಸುದ್ದಿಯನ್ನು ಕೇಳಿ ತನ್ನ ಮಗನ ಕುಶಲ ವಾರ್ತೆಯನ್ನು ಕೇಳುವ ಆಸೆಯಿಂದ ಹೊರಟು ಬಂದನು. ನಂದನು ದೂರದಿಂದಲೇ ವಸುದೇವನನ್ನು ಕಂಡು ಆದರದಿಂದೆದ್ದು ಹೋಗಿ ಆಲಿಂಗಿಸಿಕೊಂಡನು. ಇಬ್ಬರಿಗೂ ಆನಂದಬಾಷ್ಪಗಳು ಧಾರಾಕಾರವಾಗಿ ಸುರಿದುವು. ಪರಸ್ಪರ ಕುಶಲ ಪ್ರಶ್ನೆಗಳಾದ ಮೇಲೆ ವಸುದೇವನು ನಂದನನ್ನು ಕುರಿತು "ನೀನು ಭಾಗ್ಯಶಾಲಿ ; ಮುಪ್ಪಿನಲ್ಲಿ ಮಗನನ್ನು ಪಡೆದೆ. ಅದನ್ನು ಕೇಳಿ ಬಹಳ ಸಂತೋಷವಾಯಿತು. ನಂದ, ಇನ್ನು ನೀನು ಈ ಮಧುರೆಯಲ್ಲಿ ನಿಲ್ಲಬೇಡ. ಬೇಗ ಗೋಕುಲವನ್ನು ಸೇರು. ನೀನು ಕಂಸನಿಗೆ ಕೊಡಬೇಕಾದ ಹಣವನ್ನು ಕೊಟ್ಟಾಯಿತು ; ನನ್ನನ್ನು ಇಲ್ಲಿಯೇ ನೋಡಿದೆ. ಇನ್ನು ಇಲ್ಲಿ ನಿನಗೇನೂ ಕೆಲಸವಿಲ್ಲವಲ್ಲವೆ? ಬೇಗನೆ ಗೋಕುಲಕ್ಕೆ ಹೊರಡು. ಅಲ್ಲಿ ಹಲವು ಉತ್ಪಾತಗಳು ಸಂಭವಿಸುವುವು. ಜಾಗರೂಕನಾಗಿರು. ಇದು ನನ್ನ ಮಾತೆಂದು ತಿಳಿದು ತಾತ್ಸಾರ ಮಾಡಬೇಡ."

ಎಂದು ಹೇಳಿ ಅವನನ್ನು ಬೀಳ್ಕೊಟ್ಟು ಕಳುಹಿಸಿದನು.

ನಂದನು ವಸುದೇವನ ಮಾತು ಕೇಳಿ ಚಿಂತೆಗೊಳಗಾದನು. ಮನಸ್ಸಿನಲ್ಲಿಯೇ ದೇವರನ್ನು ಧ್ಯಾನಿಸುತ್ತ ಅವನು ಆತುರದಿಂದ ಗೋಕುಲಕ್ಕೆ ಧಾವಿಸಿದನು. ಅವನು ಮಧುರೆಗೆ ಹೋಗಿದ್ದ ಸಮಯದಲ್ಲಿ ಕಂಸನ ಅಪ್ಪಣೆಯಂತೆ ಹೊರಟ ಪೂತನಿಯೆಂಬ ರಕ್ಕಸಿಯು ಯಶೋದೆಯಂತೆ ವೇಷವನ್ನು ಧರಿಸಿ ಯಶೋದೆಯು ನೀರುತರಲು ಹೊರಗೆ ಹೋದ ಸಮಯವನ್ನು ನೋಡಿಕೊಂಡಿದ್ದು ನಂದನ ಮನೆಯನ್ನು ಹೊಕ್ಕಳು. ವಿಷಮಯವಾದ ತನ್ನ ಸ್ತನ್ಯವನ್ನೂಡಿ ಕೃಷ್ಣನನ್ನು ಕೊಲ್ಲಬೇಕೆಂದು ಅವಳ ಆಸೆ. ಗರುಡದೇವನನ್ನೆಬ್ಬಿಸಲು ಹೊರಡುವ ಉರಗಕನ್ಯೆಯಂತೆ ಪೂತನಿಯು ಕೃಷ್ಣನನ್ನು ಸಮೀಪಿಸಿದಳು. ಅವಳ ದುರಭಿಸಂಧಿಯನ್ನು ತಿಳಿದಿದ್ದರೂ ಅಖಿಳ ಸಚರಾಚರ ಜಗನ್ನಾಥನಾದ ಆ ಅವಿನಾಶಿ ಕೃಷ್ಣನು ಏನೂ ಅರಿಯದ ಹಾಲ ಹಸುಳೆಯಂತೆ ಪೂತನಿಯ ತೋಳತೆಕ್ಕೆಯಲ್ಲಿ ಮಲಗಿ ಅವಳ ಎದೆ ಹಾಲನ್ನು ಕುಡಿಯುವವನಂತೆ ನಟಿಸಿ ಅವಳ ಜೀವವನ್ನೇ ಹೀರಿ ಬಿಟ್ಟನು. ಪೂತನಿಯು ಮಹಾ ಯಾತನೆಯಿಂದ ಚೀರಿದರೂ ಬಿಡದೆ ಕೃಷ್ಣನು ಅವಳನ್ನು ಕೊಂದು ಬಿಟ್ಟನು. ಆ ರಕ್ಕಸಿಯು ತನ್ನ ಘೋರ ರೂಪದಲ್ಲಿ ಅಸ್ತವ್ಯಸ್ತಳಾಗಿ ಸತ್ತು ಬಿದ್ದಳು. ಅವಳ ಕರಾಳವಾದ ಆಕೃತಿಯು ನೋಟಕರಿಗೆ ಭಯಂಕರವಾಗಿತ್ತು. ಸಾಯುವಾಗ ಅವಳು ಚೀರಿಟ್ಟ ಶಬ್ದವನ್ನುಕೇಳಿ ಗಾಬರಿಯಾದ ಸುತ್ತಮುತ್ತಣ ಗೋಪ ಗೋಪಿಯರು ಓಡಿಬಂದು ಬೆಟ್ಟದಂಥ ಬೃಹದಾಕಾರದ ರಕ್ಕಸಿಯ ಶವದ ಮೇಲೆ ಮಲಗಿದ್ದ ಶಿಶು ಕೃಷ್ಣನನ್ನು ನೋಡಿ ಕಳವಳ ಪಟ್ಟು ಮಗುವನ್ನೆತ್ತಿಕೊಂಡರು. ಆ ವೇಳೆಗೆ ಯಶೋದೆಯು ಮನೆಗೆ ಬಂದಳು. ಇದೇನು ಗದ್ದಲವೆಂದು ಅವಳು ತಳಮಳಗೊಳ್ಳುತ್ತ ಒಳಗೆ ಹೋಗುವ ವೇಳೆಗೆ ಗೋಪಿಯರು ಕೃಷ್ಣನಿಗೆ ಗೋರಸವನ್ನು ಚಿಮುಕಿಸಿ, ಗೋಪುಚ್ಛವನ್ನು ಮುಟ್ಟಿಸಿ ರಕ್ಷೆಮಾಡಿ ಎತ್ತಿಕೊಂಡು ಬಂದು ಯಶೋದೆಯ ಕೈಗೆ ಕೊಟ್ಟರು. ಜಗಜ್ಜನಕನನ್ನು ಅಪ್ಪಿಕೊಂಡು ಮುಂಡಾಡುತ್ತ ಯಶೋದೆ ತನ್ನ ಕಂದನಿಗೊದಗಿದ ವಿಪತ್ತು ಪರಿಹಾರವಾದುದಕ್ಕೆ ದೈವವನ್ನು ಮನಸಾ ವಂದಿಸಿದಳು. ರೋಹಿಣಿಯೇ ಮೊದಲಾದ ಹಲವರು ಗೋಪಿಯರು ಕೃಷ್ಣನಿಗೆ ಶಾಂತಿಕರ್ಮವನ್ನು ಮಾಡಿ " ಇವನ ಮುಂದೆ

ಹರಿಚಕ್ರವಿರಲಿ, ಇವನ ಹಿಂದೆ ಹರಿಯ ಗದೆ ಕಾವಲಿರಲಿ. ಎರಡು ಪಕ್ಕಗಳಲ್ಲಿಯೂ ನಂದಕ ಶಾರ್ಙ್ಗಗಳು ರಕ್ಷಿಸಲಿ'' ಎಂದು ಹರಸಿದರು.

ಇಷ್ಟಾಗುವ ವೇಳೆಗೆ ನಂದನು ಮಧುರೆಯಿಂದ ಮನೆಗೆ ಬಂದು ಅಲ್ಲಿ ಬಿದ್ದಿದ್ದ ಪೂತನಿಯ ಬೃಹದ್ವಿಗ್ರಹವನ್ನು ಕಂಡು ನಡುಗಿಹೋದನು. ಇದೇನೆಂದು ಕೇಳುವುದಕ್ಕೂ ಅವನಿಗೆ ಧೈರ್ಯ ಉಳಿಯಲಿಲ್ಲ, ಬಾಯಿಂದ ಮಾತೇ ಹೊರಡಲಿಲ್ಲ. ಯಶೋದೆಯ ಮಡಿಲಲ್ಲಿದ್ದ ಕೃಷ್ಣನನ್ನು ಕಣ್ಣಲ್ಲಿ ಕಂಡಮೇಲೆ ಅವನಿಗೆ ಹೋದ ಜೀವ ಮತ್ತೆ ಬಂದಂತಾಯಿತು. ನಂದನಿಗೆ ಕೂಡಲೆ ವಸುದೇವನ ಮಾತು ನೆನಪಿಗೆ ಬಂತು. "ವಸುದೇವನು ದೇವನೋ, ಋಷಿಯೋ, ಅನಾಗತ ಕೋವಿದನೋ ಇರಬೇಕು. ಅವನು ನಿಜವಾಗಿ ನರನಲ್ಲ. ಅವನು ಹೇಳಿದ ಮಾತು ಸತ್ಯವಾಯಿತು. ಹೀಗೆ ಭವಿಷ್ಯವನ್ನು ತಿಳಿದು ಹೇಳಬಲ್ಲವರಾರು ?'' ಎಂದು ಅಡಿಗಡಿಗೆ ಅವನು ವಸುದೇವನನ್ನು ಹೊಗಳಿದನು.

ಕೆಲವು ದಿನಗಳ ತರುವಾಯ ನಂದ ಯಶೋದೆಯರಿಬ್ಬರೂ ಮನೆಯ ಹೊರಗಿರುವಾಗ ಇದ್ದಕ್ಕಿದ್ದಂತೆ ಬಿರುಗಾಳಿ ಬೀಸತೊಡಗಿತು. ಜಗತ್ತಿನ ದೂಳೆಲ್ಲ ಗಗನಕ್ಕೆ ಹಾರಿತೆಂಬಂತೆ ದಟ್ಟವಾದ ಕತ್ತಲು ಕವಿದುಕೊಂಡಿತು. ಗಾಳಿಯ ರಭಸಕ್ಕೆ ಮಹಾವೃಕ್ಷಗಳು ಕೂಡ ತೂರಾಡಿದವು. ಮನೆಯಲ್ಲಿ ಬಿಟ್ಟು ಬಂದ ಮಗನೇನಾದನೋ ಎಂದು ಯಶೋದೆ ತಲ್ಲಣಿಸಿದಳು. ಮಗುವಿನ ಕ್ಷೇಮಚಿಂತನೆಯಲ್ಲಿ ಕಾತರರಾದ ನಂದಯಶೋದೆಯರು ಆಗ ಮಾಡುವ ಕೆಲಸವನ್ನು ಬಿಟ್ಟು ಮನೆಯ ಕಡೆಗೆ ಓಡಿದರು. ಓಡೋಡಿ ಬಂದು ನೋಡಿದರೆ ಮಗುವು ತೊಟ್ಟಿಲಲ್ಲಿರಲಿಲ್ಲ. ದಿಕ್ಕು ದಿಕ್ಕುಗಳಲ್ಲಿಯೂ ಹಡುಕಿದರಾದರೂ ಕೃಷ್ಣನು ಎಲ್ಲಿಯೂ ಕಾಣಿಸಲಿಲ್ಲ.

ಕಂಸ ಭೃತ್ಯರಲ್ಲೊಬ್ಬನಾದ ತೃಣಾವರ್ತನೆಂಬ ರಕ್ಕಸನು ಮಾಯೆಯಿಂದ ವಾತಾಕೃತಿಯನ್ನು ಧರಿಸಿ ಬಂದು ಗೋಕುಲದಲ್ಲಿ ಅನರ್ಥಮಾಡಿ ಮನೆಯಲ್ಲಿ ಒಬ್ಬನೇ ಇದ್ದ ಶಿಶು ಕೃಷ್ಣನನ್ನು ಹೊತ್ತುಕೊಂಡು ನಭಕ್ಕೆ ಹಾರಿದ್ದನು. ಹಸುಳೆಯೇನಾದನೋ ಎಂದು ಗೋಪಿಯರು ಗಟ್ಟಿಯಾಗಿ ಅಳತೊಡಗಿದರು. ಗೋಪಾಲಕರು ಶಿಶುಕೃಷ್ಣನನ್ನರಸಿ ಕಾಣದೆ ಕಳವಳಪಟ್ಟರು. ಅವರಿಗೆ ಜೀವವೇ ಬೇಸರವಾಯಿತು. ಗೋವಳರು ಊರಿಯಲ್ಲಿ

ನಿಂತವರಂತೆ ಬಸವಳಿದು ನೆಲಕ್ಕೆ ಬಿದ್ದರು. ಗೋಪಿಯರ ನಿರಾಶೆಯ ಆಕ್ರಂದನ ಮುಗಿಲು ಮುಟ್ಟಿತು; ರಕ್ಕಸನ ಮೇಲೆ ಕುಳಿತಿದ್ದ ಕೃಷ್ಣನ ಕಿವಿಗೆ ಬಿತ್ತು. ಅವನು ತನ್ನವರ ಈ ಸಂಕಟವನ್ನು ಕಂಡು ರಕ್ಕಸನೊಡ ನಾಟ ನಾಕೆಂದು ಬಗೆದು ಕೂಡಲೇ ತೃಣಾವರ್ತನ ಕೊರಳನ್ನು ಬಲವಾಗಿ ಹಿಸುಕಿದನು. ಅಸುರನಿಗೆ ಉಸಿರು ಕಟ್ಟಿ ದೊಡ್ಡ ಆನೆ ನೆಲಕ್ಕೆ ಬೀಳುವಂತೆ ಬಿದ್ದನು. ಕೃಷ್ಣನು ಮತ್ತೆ ನರಶಿಶುತನವನಾಂತು ಅಸುರನ ಶವದಮೇಲೆ ಮಲಗಿಕೊಂಡಿದ್ದನು. ತೃಣಾವರ್ತನು ನೆಲಕ್ಕೆ ಬಿದ್ದ ಕೂಡಲೇ ಗೋಕು ಲದ ಸರ್ವಜನರೂ ಚೇತರಿಸಿಕೊಂಡರು. ಅವರ ಕಣ್ಣಿಗೆ ಕವಿದಿದ್ದ ಮಬ್ಬು ಹರಿಯಿತು. ಹೋದ ಜೀವ ಮರಳಿ ಬಂದ ಹಾಗಾಯಿತು. ಕೃಷ್ಣನನ್ನು ಕಂಡು ಗೋಪಗೋಪಿಯರು ಹರ್ಷ ಸಂಭ್ರಮಗಳಿಂದೋಡಿ ಬಂದರು. ನಂದಯಶೋದೆಯರು ಮಗುವನ್ನೆತ್ತಿಕೊಂಡು ಆನಂದರಭಸದಲ್ಲಿ ಮುಳು ಗಾಡಿದರು. ಜಗತ್ತನ್ನೇ ನುಂಗಬಲ್ಲಂಥ ಈ ರಕ್ಕಸನೆಲ್ಲಿ? ಈ ಸಣ್ಣ ಶಿಶು ವೆಲ್ಲಿ? ಇಂಥಾ ರಕ್ಕಸನ ಮೇಲೆ ಹತ್ತಿ ನಭಕ್ಕೆ ಹಾರಿ ಮತ್ತೆ ಕೆಳಗೆ ಇಳಿದು ಬರುವ ಈ ಅದ್ಭುತವನ್ನೇನೆಂದು ತಿಳಿಯೋಣ?" ಎಂದು ಗೋಪರು ತಮ್ಮ ತಮ್ಮಲ್ಲಿ ಅಂದುಕೊಳ್ಳುತ್ತಿದ್ದರು ಕೆಲವೇ ದಿನಗಳ ಹಿಂದೆ ಪೂತನಿಯ ಘೋರ ರೂಪವನ್ನು ನೋಡಿದ್ದ ಗೋಪರಿಗೆ ಇಷ್ಟು ಬೇಗನೆ ಇನ್ನೊಬ್ಬ ರಕ್ಕಸನ ಶವವನ್ನು ಕಂಡು ಬಹಳ ಭಯವಾಯಿತು. ಇದೆಲ್ಲ ಕಂಸನ ಕುತಂತ್ರವೆಂದು ಅವರು ಅರಿಯರು. ಇದೇನೋ ಉತ್ಪಾತವೆಂದು ಅವರು ಭಯಾಕುಲರಾದರು. ಮತ್ತೆ ಕೃಷ್ಣನ ಮುಖವನ್ನು ಕಾಣುತ್ತಲೇ ಗೋಪ ಗೋಪಿಯರು ಮಿಕ್ಕೆಲ್ಲ ವಿಚಾರಗಳನ್ನೂ ಮರೆತು ಹರ್ಷಚಿತ್ತರಾಗಿ ಶಿಶು ಕೃಷ್ಣನಿಗೆ ಹಲವು ಶಾಂತಿ ಕರ್ಮಗಳನ್ನು ಮಾಡಿದರು. ಕೃಷ್ಣನನ್ನು ನೋಡಿ ದಣಿಯದು ಅವರ ಕಣ್ಣು. ಅವನ ಗುಣವನ್ನು ಹಾಡಿ ದಣಿಯರು ಗೋಪಿಯರು. ಚಿನ್ಮಯನನ್ನು ಎತ್ತಿಕೊಂಡು ನಲಿದಾಡಿದ ಆ ಗೋಪಿಕೆ ಯರ ಭಾಗ್ಯವನ್ನೆಷ್ಟು ಹೊಗಳಿದರೂ ಸ್ವಲ್ಪವೇ

ಹೀಗೆ ಕೃಷ್ಣ ಬಲರಾಮರು ತಮ್ಮ ಶಿಶು ಲೀಲೆಗಳಿಂದ ತಂದೆತಾಯಿಗ ಳನ್ನು ನಲಿಸುತ್ತ ಗೋಕುಲದ ಜನರ ಕಣ್ಣಮಣಿಗಳಾಗಿ ಬೆಳೆದು ನೆರೆ ಹೊರೆಯ ಮನೆಗಳಿಗೆ ಹೋಗುತ್ತ ಮಕ್ಕಳೊಡನಾಡುತ್ತ ಶ್ವೇತನೀಲ

ಮಹಾದ್ರಿಗಳೇ ಮಗುವಿನ ರೂಪದಲ್ಲಿ ಬಂದವೆಂಬಂತೆ ಶೋಭಿಸುತ್ತಿದ್ದರು. ಯಶೋದೆ ಶಿಶು ಕೃಷ್ಣನ ಕೈಹಿಡಿದು ಮೆಲ್ಲಗೆ ನಡೆಸುತ್ತಾ ಅವನ ತೊದಲು ಮಾತುಗಳನ್ನು ಕೇಳಿ ನಲಿಯುತ್ತ ಆ ತ್ರಿಭುವನ ಸೂತ್ರಧಾರಿಯನ್ನು ತನ್ನ ಮಗನೆಂದೇ ನಂಬಿ ಆನಂದಿಸುತ್ತಿದ್ದಳು. ನಿತ್ಯತೃಪ್ತನಿಗೆ ಆ ತಾಯಿ ಹಾಲು ಬೆಣ್ಣೆಗಳನ್ನು ಮುದ್ದಿನಿಂದ ಉಣಿಸುತ್ತಿದ್ದಳು. ಆ ದಾನವಾಂತಕನು ಬೇಕೆಂದೇ ಶಿಶುತನವನ್ನು ಧರಿಸಿದವನಾದ್ದರಿಂದ ನರಶಿಶುವಿನಂತೆಯೇ ನಟಿಸುತ್ತ ಹಲವು ಲೀಲೆಗಳನ್ನು ಮೆರೆದು ತಾನು ಭಕ್ತಪರಾಧೀನನೆಂಬುದನ್ನು ನಿದರ್ಶನಮಾಡಿಕೊಟ್ಟನು.

ಕೊಂಚಕಾಲದ ತರುವಾಯ ಬಲಪುರುಷೋತ್ತಮರು ನೆರೆಮನೆ ಮುಮ್ಮನೆಗಳ ಗೊಲ್ಲಹುಡುಗರೊಡನೆ ಬಗೆಬಗೆಯ ಆಟಗಳನ್ನಾಡುತ್ತ ಗೋಕುಲದ ದೂಳಿನಲ್ಲಿ ಮರಿಯಾನೆಗಳಂತೆ ಹೊರಳಾಡಿ ಮೆರೆಯುತ್ತಿದ್ದರು. ಮೊದಲು ಮೊದಲು ನೆರೆಯ ಗೋಪಸ್ತ್ರೀಯರಿಗೆ ಈ ಬಾಲಕರ ಚೇಷ್ಟೆಗಳು ಬಹಳ ಮುದ್ದಾಗಿ ತೋರಿದವು. ಇವರು ತಮ್ಮ ಗೆಳೆಯರ ಮನೆಗಳಿಗೆ ನುಗ್ಗಿ ಅಲ್ಲಿ ಕಟ್ಟಿಹಾಕಿದ್ದ ಕರುಗಳನ್ನು ಅಕಾಲದಲ್ಲಿ ಬಿಚ್ಚಿ ಅವು ಹಸುಗಳ ಹಾಲನ್ನೆಲ್ಲ ಕುಡಿಯಲು ಅನುವುಮಾಡುತ್ತಿದ್ದರು. ಒಂದೊಂದು ಸಲ ಈ ಹುಡುಗರೇ ಚಿಕ್ಕ ಕರುಗಳಂತೆ ಹಸುಗಳ ಕೆಚ್ಚಲಿಗೇ ಬಾಯಿಟ್ಟು ಹಾಲು ಕುಡಿಯುತ್ತಿದ್ದರು. ನೆಲುವಿನ ಮೇಲೆ ಮುಚ್ಚಿಟ್ಟಿದ್ದ ಹಾಲು ಬೆಣ್ಣೆಗಳು ಮಾಯವಾಗತೊಡಗಿದವು. ರಾಮಕೃಷ್ಣರು ತಾವು ಕುಡಿದು ತಮ್ಮ ಗೆಳೆಯರಿಗೂ ಕೊಟ್ಟು ಇನ್ನೂ ಉಳಿದ ಬೆಣ್ಣೆಯನ್ನು ಕೋತಿಗಳಿಗೆ ಹಾಕಿಬಿಡುತ್ತಿದ್ದರು. ಆಗ ಯಾರಾದರೂ ಕಂಡು ದಂಡಿಸಿದರೆ ಸಿಟ್ಟಾಗಿ ಆ ಮಡಿಕೆಗಳನ್ನೇ ನೆಲಕ್ಕೆ ಕುಕ್ಕಿ ಒಡೆಯುವುದಕ್ಕೂ ಅವರು ಹಿಂತೆಗೆಯುತ್ತಿರಲಿಲ್ಲ. ರಾಮಕೃಷ್ಣರ ಜತೆಗೆ ಸೇರಿ ಇತರ ಗೋಪ ಬಾಲಕರೂ ಇಂಥಾ ಕೆಲಸಗಳಲ್ಲಿ ನಿಪುಣರಾದರು. ಈ ಉಪಟಳವನ್ನು ತಡೆಯಲಾರದೆ ಗೋಪಿಯರು ಒಂದು ದಿನ ಯಶೋದೆಯಲ್ಲಿಗೆ ಬಂದು ಕೃಷ್ಣನ ಮೇಲೆ ದೂರು ಹೇಳಿದರು ಯಶೋದೆಯು ನಸುನಗುತ್ತ ''ನೀವು ಸುಮ್ಮನೆ ದೂರಿದರೆ ಆಗದು. ನಿಮ್ಮ ಮನೆಗೆ ಬಂದು ಬೆಣ್ಣೆಯನ್ನು ಮೆಲ್ಲುತ್ತಿರುವಾಗ ಕೃಷ್ಣನನ್ನು ಹಿಡಿದು ತನ್ನಿ ಆಗ ನಾನು ಅವನನ್ನು ದಂಡಿಸುತ್ತೇನೆ." ಎಂದು ನುಡಿದು ಗೋಪಿಯರನ್ನು

ಕಳುಹಿಸಿಬಿಟ್ಟಳು.

ಗೋಪಿಯರು ಯಶೋದೆಯೊಡನೆ ಮಾತನಾಡಿ ತಮ್ಮ ಮನೆಗಳಿಗೆ ಹಿಂತಿರುಗುವ ವೇಳೆಗೆ ಅಲ್ಲಿ ಕೃಷ್ಣನು ಬಂದು ನೆಲುವಿನ ಮೇಲಿದ್ದ ಮಡಿಕೆಗಳನ್ನಿಳಿಸಿ ಆತುರಾತುರದಿಂದ ಬೆಣ್ಣೆಯನ್ನು ತಿನ್ನುತ್ತಿದ್ದನು. ಅವನ ಕೈ ಬಾಯಿ ಮೈಗೆಲ್ಲ ಬೆಣ್ಣೆ ಮೆತ್ತಿಕೊಂಡಿದ್ದಿತು. "ಕಳ್ಳ ಸಿಕ್ಕಿಬಿದ್ದ" ಎಂದು ಬಗೆದು ಗೋಪಿಯರು ಅವನನ್ನು ರಟ್ಟೆ ಹಿಡಿದೆಳೆತಂದರು. ಮನೆಮನೆಯಲ್ಲಿಯೂ ಇದೇ ಕಥೆ. ಅನೇಕ ಗೋಪಿಯರು ಕೃಷ್ಣ ನಮಗೇ ಸಿಕ್ಕಿದನೆಂದು ಯಶೋದೆಯ ಬಳಿಗೆ ಬಂದು ನೋಡಿದರೆ ಅಲ್ಲಿ ಶಿಶು ಕೃಷ್ಣನು ಮುದ್ದಾಗಿ ಮಾತನಾಡುತ್ತ ಯಶೋದೆಯ ಸೆರಗು ಹಿಡಿದು ನಿಂತಿದ್ದಾನೆ! ಗೋಪಿಯರು ಬೆರಗಾದರು. ಇದೇನಿರಬಹುದೆಂದು ತಿಳಿಯದೆ ಸಂಭ್ರಾಂತರಾಗಿ ತಮ್ಮ ಬರಿಗೈಗಳನ್ನು ನೋಡಿಕೊಂಡು ಏನೂ ಹೇಳಲಾರದೆ ಮೌನದಿಂದ ಹಿಂತಿರುಗಿದರು! ಕೃಷ್ಣನು ತಮ್ಮ ಕೈಗೆ ಸಿಕ್ಕಿದವನು ಹೇಗೆ ತಪ್ಪಿಸಿಕೊಂಡನೆಂಬುದೇ ಅವರಿಗೆ ತಿಳಿಯಲಿಲ್ಲ. ಕೃಷ್ಣನ ಮಾಯೆಯನ್ನು ಕುರಿತು ಚಿಂತಿಸುತ್ತ ಆ ಗೋಪಿಯರು ಮಿಕ್ಕೆಲ್ಲ ಚಿಂತೆಗಳನ್ನು ಮರೆತರು.

ಒಂದು ಹುಣ್ಣಿಮೆಯ ಸಂಜೆ ಯಶೋದೆ ಕೃಷ್ಣನನ್ನು ತನ್ನ ಮನೆಯ ಮುಂದೆ ಆಡಿಸುತ್ತಿದ್ದಾಗ ಗಗನದಲ್ಲಿ ಮೂಡಿದ ಪೂರ್ಣ ಚಂದ್ರನನ್ನು ನೋಡಿ ಹಣ್ಣೆಂದು ಭ್ರಮಿಸಿ ಅದನ್ನು ತನಗೆ ಕೊಡಬೇಕೆಂದು ಕೃಷ್ಣನು ಅವಳನ್ನು ಬಹಳವಾಗಿ ಪೀಡಿಸಿದನು. ಯಶೋದೆಯು ಬಹಳ ಬೇಸತ್ತು ಕೃಷ್ಣನನ್ನು ಮೇಲಕ್ಕೆತ್ತಿ ಹಿಡಿದು "ಬೇಕಾದರೆ ನೀನೇ ಆ ಹಣ್ಣನ್ನು ಕಿತ್ತು ತೆಗೆದುಕೋ" ಎಂದು ಗದರಿಸಿಕೊಂಡಳು. ಆಗ ಪುರುಷೋತ್ತಮನು ದಿಕ್ಪಾಲಕರೆಲ್ಲ ತನ್ನ ಆಜ್ಞೆಯಿಂದಲೇ ತಮ್ಮ ತಮ್ಮ ಸ್ಥಾನಗಳಲ್ಲಿರುವರೆಂಬುದನ್ನು ತೋರಿಸಿ ಕೊಡುವಂತೆ ಚಂದ್ರನನ್ನು ತನ್ನ ಕೈಗೆತ್ತಿಕೊಂಡನು. ಸುತ್ತ ಮುತ್ತ ಇದ್ದವರಿಗೆಲ್ಲ ಗೋಚರವಾಗುವ ರೀತಿಯಲ್ಲಿ ಚಂದ್ರನು ಆಕಾಶದಿಂದ ಇಳಿದು ಶ್ರೀ ಕೃಷ್ಣನ ಪುಟ್ಟ ಕೈಗಳಿಗೆ ಸಿಲುಕಿದನು. ಈ ಮಹಾದ್ಭುತವನ್ನು ಕಂಡು ಯಶೋದೆ ಗಾಬರಿಯಾಗಿ ಕಣ್ಣು ಮುಚ್ಚಿಕೊಂಡಳು. ತಾಯಿಯ ಗಾಬರಿಯನ್ನು ಕಂಡು ಕರುಣೆಯಿಂದ ಚಂದ್ರನನ್ನು ಮತ್ತೆ ಅಂಬರಕ್ಕೆ ಕಳುಹಿಸಿಬಿಟ್ಟು ಕೃಷ್ಣನು ನರಶಿಶುತನವನಾಂತನು. ಸರಳ ಮನಸ್ಕರಾದ ಗೋಪ ಗೋಪಿ

ಯರಿಗೆ ಇದೇನು ದೈವಲೀಲೆಯೋ, ಉತ್ಪಾತವೋ, ಕೃಷ್ಣನ ಮಹಿಮಾತಿಶಯವೋ ಅಥವಾ ತಮ್ಮ ಮನಸ್ಸಿನ ಭ್ರಾಂತಿಯೋ ಏನೂ ತಿಳಿಯಲಿಲ್ಲ. ಅವರು "ಹರಿಯೇ ಶರಣು" ಎಂದು ಒಂದೇ ಮನಸ್ಸಿನಿಂದ ಭಗವಂತನ ಧ್ಯಾನ ಮಾಡಿ ಭೀತಿಯನ್ನು ಬಿಟ್ಟರು.

ಇದಾದ ಸ್ವಲ್ಪ ದಿನಗಳ ಮೇಲೆ ಒಂದು ಮಧ್ಯಾಹ್ನ ಕೃಷ್ಣ ಬಲರಾಮರು ಇತರ ಗೋಪ ಕುಮಾರಕರೊಡನೆ ಆಟವಾಡುತ್ತಿದ್ದಾಗ ಹುಡುಗರಲ್ಲಿ ಯಾವುದೋ ಕಾರಣದಿಂದ ಜಗಳ ಹುಟ್ಟಿತು. ಅವರ ಪೈಕಿ ಒಬ್ಬ ಹುಡುಗನು ಯಶೋದೆಯ ಬಳಿಗೆ ಬಂದು "ಕೃಷ್ಣ ಮಣ್ಣು ತಿನ್ನುತ್ತಿದ್ದಾನೆ" ಎಂದು ಚಾಡಿ ಹೇಳಿದನು. ಯಶೋದೆಯು ಓಡಿ ಬಂದು ಆಡುತ್ತಿದ್ದ ಕೃಷ್ಣನನ್ನು ಹಿಡಿದು "ಮಣ್ಣನ್ನೇಕೆ ತಿಂದೆ? ಆ ಮೇಲೆ ಹೊಟ್ಟೆ ನೋವು ಬರುವುದಲ್ಲ!" ಎಂದು ದಂಡಿಸಿದಳು. "ನಾ ಮಣ್ಣು ತಿನ್ನಲೇ ಇಲ್ಲ" ಎಂದ ಕೃಷ್ಣ. "ಹುಡುಗರೆಲ್ಲ ಹೇಳುವರಲ್ಲ?" "ಇವರೆಲ್ಲ ನನಗಾಗದವರು. ಬೇಕಾಗಿ ನನ್ನ ಮೇಲೆ ಚಾಡಿ ಹೇಳುತ್ತಾರೆ." "ನಿನ್ನ ಅಣ್ಣ ಬಲರಾಮನನ್ನೇ ಕೇಳೋಣ." "ದಾಯಾದಿಯ ಮಾತು ನಂಬತಕ್ಕದ್ದಲ್ಲ." ಹೀಗೆ ಕೃಷ್ಣನು ಮಾತಿಗೆ ಮಾತು ಹೇಳುತ್ತಿದ್ದಾಗ ಅವನ ಕೈ ಬಾಯಿಗಳು ಕೆಸರಾಗಿದ್ದುದನ್ನು ಗಮನಿಸಿದ ಯಶೋದೆ "ಎಲ್ಲಿ, ನಿನ್ನ ಬಾಯಿ ತೆರೆ, ನೋಡೋಣ" ಎನ್ನಲು ಕೃಷ್ಣನು ಬಾಯಿ ತೆರೆದನು. ಅವನ ಬಾಯೊಳಗಿನ ಅದ್ಭುತ ದೃಶ್ಯವನ್ನು ಕಂಡು ಯಶೋದೆ ಸಂಭ್ರಾಂತಳಾದಳು. ಆ ಮಹಾದ್ಭುತವನ್ನು ಏನೆಂದು ವರ್ಣಿಸೋಣ! ಯಶೋದೆಗೆ ಆ ಮಗುವಿನ ಬಾಯಲ್ಲಿ ಇಡೀ ಬ್ರಹ್ಮಾಂಡವೇ ಕಾಣಿಸಿತು! ಭೂಮಿ, ಸೂರ್ಯ, ದಿಕ್ಪಾಲಕರು, ಗ್ರಹನಕ್ಷತ್ರಗಳು, ಕುಲಪರ್ವತಗಳು, ನದೀ ಸಾಗರಗಳು, ಸಪ್ತ ದ್ವೀಪಗಳು, ದೇಶ ನಗರ ಗ್ರಾಮಗಳು, ಗೋಕುಲ, ಗೋಕುಲದ ಜನರು, ಎಲ್ಲರೂ ಆಕೆಗೆ ಆ ಶಿಶುವಿನ ಬಾಯಲ್ಲಿ ಕಾಣಿಸಿದರು! ಯಶೋದೆ ಭ್ರಮಿತ ಚಿತ್ತಳಾದಳು. ಇದೇನೆಂದರಿಯದೆ ಆಕೆ ತಲ್ಲಣಿಸಿದಳು. ದಿಕ್ಕು ತೋರದೆ ಕಡೆಗೆ "ಶ್ರೀ ಹರಿಯೇ ಶರಣು" ಎಂದು ತನ್ನ ಸುಖ ದುಃಖಗಳನ್ನೆಲ್ಲ ಶ್ರೀಹರಿಗೊಪ್ಪಿಸಿ ದೇವರಿಗೆ ನಮಿಸಿ ಕುಳಿತಳು. ಕ್ರಮೇಣ ಆ ಅದ್ಭುತ ದೃಶ್ಯ ಕಣ್ಮರೆಯಾಯಿತು. ಜಗತ್ತೆಲ್ಲ ತನ್ನಲ್ಲಿ ಅಡಗಿರುವುದೆಂಬು

ದನ್ನು ಹೇಳುವಂತೆ ತನ್ನ ವಿಶ್ವ ಸ್ವರೂಪವನ್ನು ತಾಯಿಗೆ ತೋರಿಸಿ ಮತ್ತೆ ಸಾಧಾರಣ ಶಿಶುವಿನಂತೆ ನಗುತ್ತ ನಲಿಯುತ್ತ ಆಕೆಯ ತೊಡೆಯ ಮೇಲೆ ಕುಳಿತುಬಿಟ್ಟನು. ಭಗವಂತನ ಮಾಯೆ ದೊಡ್ಡದು. ಯಶೋದೆ ಇದ ನ್ನೆಲ್ಲ ಆ ಕ್ಷಣದಲ್ಲಿ ಮರೆತು ಮತ್ತೆ ಕೃಷ್ಣನನ್ನು ಮುದ್ದಿಸಿ ಆಡಿಸತೊಡಗಿದಳು.

ಇನ್ನೊಂದು ದಿನ ಯಶೋದೆಯು ಕೃಷ್ಣನಿಗೆ ಹಾಲು ಕುಡಿಸಿ ಮಂಚದ ಮೇಲೆ ಮಲಗಿಸಿ ಅವನಿಗೆ ನಿದ್ದೆ ಬಂದುದನ್ನು ಕಂಡು ತಾನು ಮೊಸರನ್ನು ಕಡೆಯಲು ಹೋದಳು. ಇತ್ತ ಕೃಷ್ಣನು ಎಚ್ಚತ್ತು ಪಕ್ಕದಲ್ಲಿ ತಾಯಿಯಿಲ್ಲದು ದನ್ನು ಕಂಡು ಸಿಟ್ಟಾಗಿ ಮಂಚದಿಂದಿಳಿದು ಕಡೆಗೋಲನ್ನು ಹಿಡಿದು ಯಶೋ ದೆಯ ಕೆಲಸಕ್ಕೆ ಅಡ್ಡಿಮಾಡಿ ತನ್ನನ್ನೆತ್ತಿಕೊಳ್ಳಬೇಕೆಂದು ಪೀಡಿಸಿದನು. ಅವಳು ಮಗುವನ್ನೆತ್ತಿಕೊಂಡು ಕುಳಿತಿರುವಾಗ ಅಡಿಗೆಯ ಮನೆಯಲ್ಲಿ ಒಲೆಯ ಮೇಲಿಟ್ಟಿದ್ದ ಹಾಲು ಉಕ್ಕಿದುದು ಕಾಣಿಸಿತು. ಆಗ ಆತುರದಿಂದ ಯಶೋದೆ ಮಗುವನ್ನು ಕೆಳಕ್ಕಿಳಿಸಿ ಒಲೆಯ ಬಳಿಗೆ ಧಾವಿಸಿದಳು. ಕೃಷ್ಣ ನಿಗೆ ಕೋಪ ಬಂತು. ಅವನು ಅಳುತ್ತ ಹೊರಟು ಅದುವರೆಗೆ ಯಶೋದೆ ಮೊಸರು ಕಡೆಯುತ್ತಿದ್ದ ಮಡಕೆಯನ್ನು ಮಂತಿನಿಂದ ಹೊಡೆದು ಚೂರು ಮಾಡಿದನು. ಮಡಕೆಯೊಡೆದ ಸದ್ದು ಕೇಳಿಬಂದು ನೋಡಿದರೆ ಮೊಸರೆಲ್ಲ ಚೆಲ್ಲಿಹೋಗಿ ಕೃಷ್ಣನು ಹಲ್ಲು ಕಿರಿಯುತ್ತ ನಿಂತಿದ್ದಾನೆ! ಯಶೋದೆಗೆ ಬಹಳ ಸಿಟ್ಟು ಬಂತು ಇತರ ಗೋಪಿಯರು ಹಿಂದೆ ಹೇಳಿದ್ದ ದೂರುಗಳೆಲ್ಲ ಆಗ ಅವಳ ಸ್ಮರಣೆಗೆ ಬಂದುವು. ಅವಳು ಕೃಷ್ಣನನ್ನು ರಟ್ಟೆ ಹಿಡಿದೆಳೆತಂದು "ಸೃಷ್ಟಿಯಲ್ಲಿ ನಿನ್ನಂಥ ಮಕ್ಕಳಿಲ್ಲ. ನಿನ್ನ ಅವಾಂತರಕ್ಕೆ ಮಿತಿಮೇರೆಗಳಿಲ್ಲ ವಾಗಿವೆ. ನಿನ್ನನ್ನು ಕಟ್ಟಿಹಾಕಿದಲ್ಲದೆ ನಿನಗೆ ಬುದ್ಧಿ ಬರುವುದಿಲ್ಲ" ಎಂದು ಗದರಿಸುತ್ತಾ ಆ ಜಗದುದರನ ಹೊಟ್ಟೆಗೆ ಹಗ್ಗ ಕಟ್ಟಲು ತೊಡಗಿದಳು. ಗೋಕುಲದ ಗಾಡಿಕಾತಿಯರು ಯಶೋದೆಯ ಈ ಕೋಪವನ್ನು ಕಂಡು ಬೆರಗಾದರು. ಶಿಶು ಕೃಷ್ಣನ ಮುಗ್ಧ ಮೋಹನ ಮೂರ್ತಿಯನ್ನು ಕಂಡು ಅವರಿಗೆ ಮರುಕವಾಯಿತು! ಆದ್ಯಂತ ರಹಿತನಾದ ಕೃಷ್ಣನು ಉದ್ದೇಶ ಪೂರ್ವಕವಾಗಿಯೇ ಬಂಧನಕ್ಕೊಳಗಾದನೆಂದು ಅವರಿಗೆ ಹೇಗೆ ತಿಳಿಯ್ಬ ಬೇಕು? ಇತ್ತ ಯಶೋದೆ ಕೋಪದ ಭರದಲ್ಲಿ ಹಿಂದು ಮುಂದು ನೋಡದೆ ಕೃಷ್ಣನನ್ನು ಮನೆಯ ಅಂಗಳದಲ್ಲಿದ್ದ ಒಂದು ಮರದ ಒರಳಿಗೆ

ಕಟ್ಟಿ ಹಾಕಿ ತಾನು ನೀರಿಗೆ ಹೊರಟು ಹೋದಳು.

ತಾಯಿಯು ಕಣ್ಮರೆಯಾದಮೇಲೆ ದಾಮೋದರನಾದ ಕೃಷ್ಣನು ಮೆಲ್ಲಗೆ ಆ ಒರಳನ್ನೂ ಎಳೆದುಕೊಂಡುಬಂದು ಮನೆಯ ಮುಂದೆ ಎತ್ತರವಾಗಿ ಬೆಳೆದು ನಿಂತಿದ್ದ ಅವಳಿ ಮತ್ತೀ ಮರಗಳ ಮಧ್ಯೆ ತೂರಿದನು. ಆದರೆ ಒರಳು ಆ ಮರಗಳ ಮಧ್ಯೆ ಸಿಕ್ಕಿಕೊಂಡಿತು. ಕೃಷ್ಣನು ಬಲವಾಗಿ ಎಳೆಯಲು ಆ ಮತ್ತಿಯ ಮರಗಳೆರಡೂ ಮಹತ್ತರವಾದ ಶಬ್ದ ಮಾಡುತ್ತ ಕೆಳಗೆ ಬಿದ್ದುವು. ಆ ಮತ್ತಿಯ ಮರಗಳು ಸಾಧಾರಣ ಮರಗಳಲ್ಲ. ಕುಬೇರನ ಮಕ್ಕಳಾದ ನಳ ಕೂಬರಮಣಿಗ್ರೀವರೆಂಬವರು ನಾರದನ ಶಾಪದಿಂದ ಮತ್ತಿಯ ಮರಗಳಾಗಿ ಶಾಪ ವಿಮೋಚನೆಯ ದಿನವನ್ನೇ ಎದುರು ನೋಡುತ್ತಿದ್ದರು. ಕೃಷ್ಣಾನುಗ್ರಹದಿಂದ ಅವರಿಗೆ ಮೋಕ್ಷ ದೊರೆಯಿತು. ಆ ಮರಗಳು ಕೆಳಗೆ ಬಿದ್ದಕೊಡಲೆ ಹಾರ ಕುಂಡಲಧಾರಿಗಳಾದ ಧನದಾತ್ಮಜರು ಆ ಮರಗಳೊಳಗಿನಿಂದ ಎದ್ದು ಬಂದು ಕೃಷ್ಣನ ಪಾದಗಳಿಗೆ ನಮಸ್ಕರಿಸಿ ಆತನ ಆಶೀರ್ವಾದ ಪಡೆದು ತಮ್ಮ ಲೋಕಕ್ಕೆ ಹೊರಟುಹೋದರು.

ಆ ಹೆಮ್ಮರಗಳು ಬುಡಮೇಲಾಗಿ ಬಿದ್ದ ರಭಸಕ್ಕೆ ಸುತ್ತಲ ಗೋಪ ಗೋಪಿಯರು ಗಾಬರಿಗೊಂಡು ನಂದಾಲಯಕ್ಕೆ ಓಡಿಬಂದರು. ಅಂಗಳದಲ್ಲಿ ಅಂಬೆಗಾಲಿಡುತ್ತ ಕೃಷ್ಣನು ನಗುತ್ತಿದ್ದಾನೆ! ಅವನ ಹೊಟ್ಟೆಗೆ ಕಟ್ಟಿದ್ದ ಹಗ್ಗ ಹರಿಯದೆ ಹಾಗೆಯೇ ಇದೆ! ಮುಗಿಲು ಮುಟ್ಟುವಂತೆ ಬೆಳೆದಿದ್ದ ಹೆಮ್ಮರಗಳು ಮಾತ್ರ ಬಿದ್ದು ಹೋಗಿವೆ! ಆ ಆಶ್ಚರ್ಯವನ್ನು ಕಂಡು ಗೋಪರು ತಮ್ಮ ಕಣ್ಣುಗಳನ್ನೇ ನಂಬಲಾರದೆ ಹೋದರು!

'ಈ ಹೆಮ್ಮರಗಳು ಇಷ್ಟು ಆಕಸ್ಮಿಕವಾಗಿ ಬೇರು ಸಹಿತ ಕಿತ್ತು ಬೀಳುವುದುಂಟೆ? ಇಂಥಾ ಭಯಂಕರವಾದ ಶಬ್ದವನ್ನು ಕೇಳಿಯೂ ಅಂಜದೆ ಈ ಮಗು ನಗುತ್ತಿದೆಯಲ್ಲಾ? ಇದೇನೋ ಮಹಾ ಉತ್ಪಾತವೇ ಸರಿ' ಎಂದು ಗೋಪಗೋಪಿಯರು ಭೀತಚಿತ್ತರಾಗಿ ಮಾತನಾಡಿಕೊಳ್ಳುತ್ತಿದರು. ಆಗ ಕೆಲವರು ಕೃಷ್ಣನೇ ತರುಘಾತಕನೆಂದು ಹೇಳಿದರು. ಆದರೆ ಅದರಲ್ಲಿ ಯಾರಿಗೂ ನಂಬಿಕೆ ಹುಟ್ಟಲಿಲ್ಲ. "ಹೆಮ್ಮರಗಳನ್ನು ಕೀಳುವ ಶಕ್ತಿ ಹಸುಳೆಗೆಲ್ಲಿಂದ ಬರಬೇಕು? ಅದು ಆಗದ ಮಾತು" ಎಂದು ಹಲವರು ತರ್ಕಿಸುತ್ತಿದ್ದರು. ಆ ವೇಳೆಗೆ ಅಲ್ಲಿಗೆ ಬಂದ ನಂದನು ಕೃಷ್ಣನ ಹೊಟ್ಟೆಗೆ ಹಗ್ಗ

ಕಟ್ಟಿದ್ದುದನ್ನು ಕಂಡು ಕೋಪಗೊಂಡನು. "ಹೀಗೆ ಮಕ್ಕಳನ್ನು ಸೊಕ್ಕಿನಿಂದ ಒರಳಿಗೆ ಕಟ್ಟುವವರುಂಟೆ? ಅಯ್ಯೋ, ಈ ಹೆಂಗಸಿನ ದೆಸೆಯಿಂದ ಕೆಟ್ಟೆ" ಎಂದು ನುಡಿದು ನಂದನು ಯಶೋದೆಯನ್ನು ದಂಡಿಸುತ್ತ ಕಂಬನಿ ದುಂಬಿದನು. ಒಡನೆಯೇ ಕೃಷ್ಣನಿಗೆ ಕಟ್ಟಿದ್ದ ಹಗ್ಗವನ್ನು ಬಿಚ್ಚಿ ಅವನನ್ನು ತಕ್ಕೈಸಿಕೊಂಡು "ನನ್ನ ಮಕ್ಕಳ ಮಾಣಿಕವೇ, ಬಾ. ನನ್ನ ಮರಿಯಾನೆ, ಬಾ. ಇಂದು ನಿನ್ನನ್ನು ನೋಡುವ ಭಾಗ್ಯ ಪಡೆದೆನಲ್ಲಾ! ನನ್ನ ಪೂರ್ವ ಪುಣ್ಯದಿಂದ ನೀನು ಈ ಆಪತ್ತಿನಿಂದ ಪಾರಾದೆ, ಪ್ರಾಣವುಳಿಯಿತು." ಎಂದು ಮುದ್ದಾಡಿದನು. ಯಶೋದೆಯು ಗೋಪಿಯರೊಡನೆ ಹಲವು ಶಾಂತಿಕರ್ಮಗಳನ್ನು ನಡೆಸಿದಳು. ಕೃಷ್ಣನ ಕಥೆಯನ್ನು ಗೋಪಿಯರು ಆನಂದದಿಂದ ವರ್ಣಿಸುತ್ತಾ ನಿತ್ಯಕೃತ್ಯಗಳನ್ನು ಮರೆತರು. ಹೀಗೆ ಶ್ರೀ ಕೃಷ್ಣನು ಗೋಕುಲದಲ್ಲಿ ಗೋಪಿಯರಿಗೆ ಆನಂದವನ್ನುಂಟುಮಾಡುತ್ತ ಅದ್ಭುತ ಕೃತ್ಯಗಳನ್ನು ಮಾಡಿ ಬಾಲಲೀಲೆಗಳನ್ನು ಮೆರೆದು ಎಲ್ಲರಿಗೂ ಪರಮ ಪ್ರೀತಿಪಾತ್ರನಾದನು.

## ಬೃಂದಾವನ

ಕಂಸ ಭೃತ್ಯರಾದ ದಾನವರಿಂದ ಗೋಪರಿಗೆ ಹಿಂಸೆ ಬಹಳವಾಯಿತು. ಆದರೆ ನಂದಾದಿಗಳು ಈ ಹಲವು ಉತ್ಪಾತಗಳ ಕಾರಣವನ್ನು ಊಹಿಸಲಾರದೆ ಹೋದರು. ಹಿಂದೆ ವಸುದೇವನು ಹೇಳಿದ್ದ ಮಾತನ್ನು ನೆನೆಸಿಕೊಂಡು ನಂದನು ಇನ್ನೂ ಏನೇನು ವಿಪತ್ತುಗಳು ಕಾದಿವೆಯೋ ಎಂದು ಮರುಗಿದನು. ಇನ್ನು ಗೋಕುಲವನ್ನು ಬಿಟ್ಟು ಬೇರೆಲ್ಲಿಯಾದರೂ ಹೋಗಿ ನೆಲಸಬೇಕೆಂದು ಅವನು ಸಂಕಲ್ಪಿಸಿದನು. ಇನ್ನು ತಡಮಾಡಿದರೆ ಕೆಡಕಾದೀತೆಂದು ಅಂಜಿ ಅವನು ಹಿರಿಯರಾದ ಗೋಪಾಲಕರ ಸಲಹೆ ಕೇಳಿದನು. ಹಲವು ಕಾಡುಗಳನ್ನು ಕಂಡಿದ್ದ ಉಪನಂದನೆಂಬ ಗೊಲ್ಲನು ನಂದನವನಕ್ಕೆ ಸರಿಸಮನೆನಿಸುವ ವನವೊಂದಿರುವುದೆಂದೂ ಅಲ್ಲಿ ಬೇಕಾದ ಹಾಗೆ ತೃಣ ಜಲ ಸಮೃದ್ಧಿಯಿರುವುದೆಂದೂ ಫಲಪುಷ್ಪ ಭರಿತವಾದ ವೃಕ್ಷಗಳಿಂದ ಕೂಡಿದ ಆ ವನಕ್ಕೆ ಕೂಡಲೆ ಹೊರಡಬಹುದೆಂದೂ ಹೇಳಿದನು. ನಂದನು ಆ ಕೂಡಲೆ ಪ್ರಯಾಣವನ್ನು ನಿಶ್ಚಯಿಸಿದನು. ಅಂದೇ ಆ ಮುಹೂರ್ತದಲ್ಲಿಯೇ ಗೋಪರು

ಬಂಡಿಗಳನ್ನು ಹೂಡಿ ಮನೆಮನೆಯ ಸರಕುಗಳನ್ನೆಲ್ಲ ಅವುಗಳಿಗೆ ಹೇರಿ ತುರು ಮಂದೆಯನ್ನಟ್ಟಿಕೊಂಡು ಪ್ರಯಾಣ ಹೊರಟರು ಸ್ತ್ರೀ ಬಾಲ ವೃದ್ಧರೆಲ್ಲ ಬಂಡಿಗಳನ್ನೇರಿದರು. ಬಂಡಿಗಳ ಇಕ್ಕೆಲದಲ್ಲಿಯೂ ಗೋಪಾಲಕರು ಆಯುಧ ಪಾಣಿಗಳಾಗಿ ಹೊರಟರು. ಕೊಂಬು ಕಹಳೆ ಕೊಳಲುಗಳ ಧ್ವನಿಗಳು ಒಟ್ಟು ಗೂಡಿದವು. ತುರುವಿಂಡುಗಳು ಸಂದಣಿಸಿ ನಡೆದವು

ಬಲರಾಮ ಕೃಷ್ಣರ ಸಮೇತರಾಗಿ ಯಶೋದೆ ರೋಹಿಣಿಯರೊಂದು ಬಂಡಿಯಲ್ಲಿ ಕುಳಿತು ಪ್ರಯಾಣ ಮಾಡುತ್ತಿದ್ದರು. ಸುತ್ತುಮುತ್ತಿನ ಬಂಡಿ ಗಳ ಗೋಪಿಕೆಯರು ಕೃಷ್ಣಚರಿತವನ್ನು ಹಾಡಿ ಹೊಗಳುತ್ತಿರಲು ಆ ತಾಯಿ ಯರು ಕೇಳುತ್ತ ಪುತ್ರಾನುರಾಗದಿಂದ ಹಿಗ್ಗುತ್ತಿದ್ದರು. ಸಮಸ್ತ ಗೋಪರು ಬಲ ಕೃಷ್ಣರ ಚರಿತ್ರೆಯನ್ನು ಹಾಡಿ ಹೊಗಳುತ್ತ ಆ ಸಂಭ್ರಮದಲ್ಲಿ ಮಾರ್ಗ ಶ್ರಮವನ್ನೇ ಮರೆತರು. ಬೃಂದಾವನವನ್ನು ಪ್ರವೇಶಿಸಿ ಅಲ್ಲಿಯ ಬನಸಿರಿ ಯನ್ನು ಕಂಡು ಗೋಪಗೋಪಿಯರು ಹರ್ಷೋದಧಿಯಲ್ಲಿ ಮುಳುಗಿದರು. ಅಲ್ಲಿನ ಗಿರಿ ವನಗಳು, ಜಲಸಮೃದ್ಧಿ ಮುಂತಾದುವನ್ನು ಗಮನಿಸಿ ಇದು ಕೃಷ್ಣ ಬಲರಾಮರ ವಾಸಕ್ಕೆ ಯೋಗ್ಯವಾದ ವನವೆಂದೇ ಅವರು ನಿರ್ಣಯಿಸಿ ಕೊಂಡರು. ಗೋಪರೆಲ್ಲ ಸೇರಿ ಮಾರ್ಗಾಯಾಸವನ್ನು ಲೆಕ್ಕಿಸದೆ ಅರ್ಧ ಚಂದ್ರಾಕಾರದ ಒಂದು ಪಾಳೆಯವನ್ನು ನಿರ್ಮಿಸಿದರು. ಅದರಲ್ಲಿ ಗೋ ಧನಕ್ಕೂ, ವೃದ್ಧ ಬಾಲ ವಧೂ ಜನಕ್ಕೂ ತಕ್ಕ ವಸತಿಗಳನ್ನು ಕಲ್ಪಿಸಿ ಗೋಪರು ಅಂದು ರಾತ್ರಿ ಕಾವಲು ಕಾಯುತ್ತಿದ್ದರು.

ಬೃಂದಾವನದ ಪ್ರಕೃತಿ ಸೌಂದರ್ಯವನ್ನೂ ಹತ್ತಿರದಲ್ಲಿದ್ದ ಗೋವರ್ಧ ನಪರ್ವತದ ಸಾನುಪ್ರದೇಶವನ್ನೂ ಯಮುನಾನದಿಯ ಪುಳಿನ ಪ್ರದೇಶವನ್ನೂ ಕಂಡು ಕೃಷ್ಣ ಬಲರಾಮರು ಆನಂದಪಟ್ಟರು. ಚತುರ್ದಶ ಭುವನ ಕರ್ತೃ ಗಳಾದ ಬಲ ನಾರಾಯಣರು ಏನೂ ಅರಿಯದ ಮಕ್ಕಳಂತೆ ಆಟವಾಡುತ್ತ ಕರುಗಳನ್ನು ಕಾಯುತ್ತ ಬಾಲಲೀಲೆಯನ್ನು ಮೆರೆದರು. ಪ್ರತಿದಿನವೂ ಅವರು ಉಳಿದ ಗೋಪ ಬಾಲಕರೊಡನೆ ಕರುಗಳನ್ನು ಅಟ್ಟಿಕೊಂಡು ಬೆಳಿಗ್ಗೆ ಮನೆಯಿಂದ ಹೊರಟು ನಡು ಹಗಲ ವೇಳೆಗೆ ಗೋಕುಲಕ್ಕೆ ಹಿಂತಿರುಗುತ್ತಿ ದ್ದರು. ಉಳಿದ ಪುಡುಗರೊಡನೆ ವಿನೋದದಿಂದ ಆಟಗಳಾಡುತ್ತ ಕೃಷ್ಣ ಬಲರಾಮರು ಎಲ್ಲರ ಪ್ರೇಮಕ್ಕೂ ಪಾತ್ರರಾಗಿದ್ದರು. ಕೃಷ್ಣನ ಕೊಳಲಿನ

ದನಿ ಕೇಳಿ ದನಗಳು ನಲಿಯುತ್ತಿದ್ದುವು.

ಒಂದು ದಿನ ನಂದಗೋಪಾದಿಗಳು ಇಂದ್ರಯಾಗ ಮಾಡಬೇಕೆಂದು ಸಂಕಲ್ಪಿಸಿ ಅದಕ್ಕೆ ತಕ್ಕ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು. ಅವರ ಸಡಗರವನ್ನು ಕಂಡು ಬಾಲಕನಾದ ಕೃಷ್ಣನು ಏನೂ ಅರಿಯದವನಂತೆ ನಂದನನ್ನು ಕುರಿತು "ನಿಮ್ಮ ಈ ಸಂಭ್ರಮವೇನು? ನೀವು ಕೈಕೊಂಡಿರುವ ಈ ಯಾಗದ ಫಲವೇನು? ಇದಕ್ಕೆ ದೇವತೆಯಾರು? ಈ ಯಾಗದ ವಿಧಿ ವಿಧಾನಗಳೇನು? ಇದನ್ನೆಲ್ಲ ನನಗೆ ಹೇಳಬಾರದೆ?" ಎಂದು ಕೇಳಿದನು. ನಂದನು "ಮಗನೆ, ಈ ಯಾಗಕ್ಕೆ ಇಂದ್ರನೇ ದೇವತೆ. ಇದರಿಂದ ಬಯಸುವ ಫಲ ವೃಷ್ಟಿ. ಸಚರಾಚರಕ್ಕೆ ಮಳೆಯೇ ಜೀವನ. ಅದನ್ನು ಕೊಡುವವನು ಇಂದ್ರ. ಅವನನ್ನು ಪೂಜಿಸುವುದಕ್ಕೋಸ್ಕರ ಈ ಯಾಗ" ಎಂದು ಹೇಳಿದನು.

ಕೃಷ್ಣನಿಗೆ ನಂದನ ಈ ಉತ್ತರದಿಂದ ತೃಪ್ತಿಯಾಗಲಿಲ್ಲ. ಅವನು ಮತ್ತೆ ಪ್ರಶ್ನೆಮಾಡತೊಡಗಿದನು. "ಈ ಯಾಗವೇನು ವೈದಿಕವೋ, ಲೌಕಿಕವೋ? ಈ ಪಾಕಶಾಸನನ ಪೂಜೆಯಿಂದ ಯಾರಿಗೆ ಹಿತ? ನೀವು ಈ ರೀತಿ ಧನ ಹಾನಿ ಮಾಡಿಕೊಳ್ಳುವುದು ಅನುಚಿತ. ನೀವು ನನ್ನ ಮಾತು ಕೇಳಿ. ಈಗ ಈ ಯಾಗ ಮಾಡಬೇಡಿ"

"ಕೃಷ್ಣಾ! ಇದು ಕುಲ ಕ್ರಮಾಗತವಾದ ಯಾಗ. ಇದನ್ನು ಮಾಡದಿದ್ದರೆ ನಮಗೆ ದೇವತೆಗಳೊಡನೆ ವಿರೋಧ ಸಂಭವಿಸುವುದು. ನಿನಗೇಕೆ ಇಂಥಾ ಯೋಚನೆ ಬಂದಿತು?"

"ನಾವು ವಿಚಾರ ಮಾಡಿದರೆ ಈ ಗಿರಿಯೇ ನಮಗೆ ದೈವ. ನಮಗೆ ಈ ಗಿರಿಯು ವಿವಿಧ ಕಂದ ಫಲಪ್ರಸೂನಗಳನ್ನೂ ಯಥೇಚ್ಛವಾದ ತೃಣ ಜಲಗಳನ್ನೂ ನೀಡಿ ನಮ್ಮನ್ನೂ ನಮ್ಮ ಗೋವುಗಳನ್ನೂ ರಕ್ಷಿಸುತ್ತಿದೆ. ಆದ್ದರಿಂದ ಯಾಗ ಮಾಡುವುದಾದರೆ ಈ ಬೆಟ್ಟಕ್ಕೇ ಮಾಡಬೇಕು. ಇಂದ್ರನಿಗೇಕೆ ಪೂಜೆ? ಗೋವರ್ಧನ ಗಿರಿಗೆ ಪೂಜೆ ಮಾಡಿ. ವಿಪ್ರರಿಗೆ ಉಪಾಹಾರಾದಿಗಳನ್ನು ಕೊಡಿ. ನೀವು ಸಿದ್ಧಗೊಳಿಸಿರುವ ಸಂಭಾರಾದಿಗಳೆಲ್ಲ ಹೀಗೆ ಸಾರ್ಥಕವಾಗಲಿ. ಸುರರಾಜನಿಂದಾಗುವ ಸಿದ್ಧಿ ಏನು? ಬ್ರಾಹ್ಮಣರು ಹೋಮಾದಿಗಳನ್ನು ನೆರವೇರಿಸಲಿ. ದೇವತೆಗಳನ್ನು ಆಹ್ವಾನಿಸಿ ಗಂಧಮಾಲ್ಯಾದಿಗ

ಳಿಂದ ಅರ್ಚಿಸಲಿ. ದಧಿ ಕ್ಷೀರಾನ್ನಾದಿಗಳಿಂದ ನಾವು ಭೂಸುರರನ್ನೂ ಬಂಧುಬಾಂಧವರನ್ನೂ ಸಂತುಷ್ಟಿಪಡಿಸೋಣ. ಆಮೇಲೆ ಸಮಸ್ತ ಗೋಪ ಗೋಪಿಕೆಯರೂ ಗೋವರ್ಧನ ಗಿರಿಗೆ ಪ್ರದಕ್ಷಿಣೆ ಮಾಡಿ ನಮಿಸಲಿ.''

ಕೃಷ್ಣನ ಮಾತು ಕೇಳಿದ ಗೋಪಾಲಕರು ತಮ ತಮಗೆ ಮನವೊಪ್ಪಿ ಇಂದ್ರಯಜ್ಞವನ್ನು ಕೈ ಬಿಟ್ಟು ಗೋವರ್ಧನ ಗಿರಿಯನ್ನಾರಾಧಿಸಲು ಸಂಸಿದ್ಧರಾದರು. ಬಂಡಿಗಳನ್ನು ಹೂಡಿ ಮಾಡಿದ ಅಡಿಗೆಯನ್ನು ಅವುಗಳಲ್ಲಿ ತುಂಬಿಕೊಂಡು ಬೆಟ್ಟವನ್ನು ಸೇರಿದರು. ಕೃಷ್ಣಬಲರಾಮರೂ ನಂದಾದಿ ಸಮಸ್ತ ಗೋಪಾಲಕರೂ ಒಟ್ಟುಗೂಡಿ ಗಿರಿಪೂಜೆ ಮಾಡಿದರು. ಗೋವಳಿಗರು ಗಿರಿಗೆ ಬಲಿ ಕೊಟ್ಟು ಕೊಂಬುಕಹಳೆಗಳ ಅಬ್ಬರದೊಡನೆ ಪೂಜಾದಿಗಳನ್ನು ಸಲ್ಲಿಸಿ ಕೈ ಮುಗಿದು ತಲೆಯೆತ್ತಿ ನೋಡಲು ಗಿರಿಶಿರದಲ್ಲಿ ಅಸುರರಿಪುವು ರೂಪಾಂತರದಲ್ಲಿ ಕುಳಿತು ಬಲಿಯನ್ನವನ್ನವೆಲ್ಲ ತಿನ್ನುತ್ತಿದ್ದುದನ್ನು ಕಂಡರು. ಶೈಲ ರಾಜನು ತಮ್ಮ ಪೂಜೆಯನ್ನು ಕೈಗೊಂಡು ಸಂತುಷ್ಟನಾದನೆಂದೂ ಆದ್ದರಿಂದಲೇ ತಾವು ನಿವೇದಿಸಿದ ಅನ್ನವನ್ನು ಪ್ರತ್ಯಕ್ಷನಾಗಿ ಸ್ವೀಕರಿಸಿದನೆಂದೂ ಅವರು ಭಾವಿಸಿದರು. ಕೃಷ್ಣನ ಸಲಹೆಯಂತೆ ತಾವು ಗೋವರ್ಧನ ಗಿರಿಗೇ ಪೂಜೆ ಮಾಡಿದುದು ಸರಿಯಾಯಿತೆಂದು ಅವರಿಗೆ ನಂಬುಗೆಯಾಯಿತು. ಅವರು ಶಿಶು ಪಶು ವೃದ್ಧ ಸಮೇತರಾಗಿ ಬೆಟ್ಟಕ್ಕೆ ಪ್ರದಕ್ಷಿಣೆ ಮಾಡಿ ನಮಸ್ಕರಿಸುತ್ತಿದ್ದಾಗ ಅವರ ಜತೆಯಲ್ಲಿ ಶ್ರೀ ಕೃಷ್ಣನೂ ಎಲ್ಲರಂತೆ ಗಿರಿರಾಜನಿಗೆ ಮೈಯಿಕ್ಕಿದನು.

ಇದನ್ನೆಲ್ಲ ಕಂಡ ದೇವರಾಜನಿಗೆ ಹೊಟ್ಟೆಯಲ್ಲಿ ಉರಿಯೆದ್ದಿತು. ತನಗೆ ಸಲ್ಲುತ್ತಿದ್ದ ಪೂಜೆ ತಪ್ಪಿದ ಕಾರಣ ಅವನು ಅಂತಸ್ತಾಪದಿಂದ ಬೆಂದು ಆಗ್ರಹದಿಂದ ಹಲ್ಲು ಕಡಿಯುತ್ತ ಗೋಪರ ಸೊಕ್ಕನ್ನು ಮುರಿಯಬೇಕೆಂದು ಸಂಕಲ್ಪಿಸಿದನು. ಬಲ ಕೃಷ್ಣರೆಂಬ ಈ ಬಾಲರ ಮಕ್ಕಳಾಟಿಕೆಯೇ ಈ ಯಾದವರಿಗೆ ಮೃತ್ಯುವೆಂದು ಅವನು ನಿರ್ಣಯಿಸಿ ತನ್ನನ್ನು ಮರೆತ ಯಾದವರಿಗೆ ಬುದ್ಧಿಕಲಿಸುವುದಕ್ಕಾಗಿ ಸಂವರ್ತ, ಪುಷ್ಕಲ ಮುಂತಾದ ಮೇಘಗಳನ್ನು ಬಿಟ್ಟು ಗೋವರ್ಧನಗಿರಿಯ ಮೇಲೆ ರಭಸದಿಂದ ಮಳೆಗರೆಯುವಂತೆ ಮಾಡಿದನು. ಕೂಡಲೆ ಆ ಪ್ರಾಂತ್ಯವೆಲ್ಲ ಕತ್ತಲಾಯಿತು. ಗಗನದಲ್ಲಿ ಮಿಂಚುಗಳಾಡತೊಡಗಿದವು ಗಗನದಿಂದ ಭೂಮಿಯ ತನಕ

ಕಂಬನೆಟ್ಟಂತೆ ಒಂದೇ ಸಮನಾದ ಧಾರಾವೃಷ್ಟಿ ಸುರಿಯತೊಡಗಿತು. ಸುತ್ತಮುತ್ತಲೂ ಇದ್ದ ಗಿಡ ಬಳ್ಳಿಗಳೂ ಕಾಣಿಸದಂತೆ ನೀರು ಪ್ರವಾಹವಾಗಿ ಹರಿಯ ತೊಡಗಿತು. ನೀರೊಳಗಿಟ್ಟ ಮೃತ್ತಿಕೆಯಂತೆ ಗೋಕುಲವೆಲ್ಲ ಕ್ಷಣಮಾತ್ರದಲ್ಲಿ ತೊಯ್ದು ಹೋಯಿತು. ಗೋವುಗಳು ಕಂಗೆಟ್ಟು "ಅಂಬಾ" ಎಂದು ಕಿರಿಚತೊಡಗಿದುವು. ಸಿಡಿಲು ಮಳೆಗಾಳಿಗಳಿಗೆ ಸಿಕ್ಕಿ ಕಂಗೆಟ್ಟ ಗೋಪಾಲಕರು ದಿಕ್ಕುತೋರದೆ ಕೃಷ್ಣನಿಗೆ ಮೊರೆಯಿಟ್ಟರು. ಇಂದ್ರ ಯಜ್ಞವನ್ನು ಬಿಟ್ಟಿದ್ದರಿಂದ ತಮಗೀಕೇಡೊದಗಿತೆಂದು ಕೆಲವರು ಪೇಚಾಡಿದರು. "ಕೃಷ್ಣನಿರುವಾಗ ನಮಗೆ ವಿಪತ್ತೆಲ್ಲಿಯದು?" ಎಂದು ಇನ್ನು ಕೆಲವರು ವಾದಿಸಿದರು ಗೋಪ ಸಮೂಹದಲ್ಲಿ ಗಜಬಜವಾಯಿತು. ಗೋಪರ ಮೊರೆಯನ್ನು ಕೇಳಿ ಶ್ರೀಕೃಷ್ಣನು "ಅಂಜದಿರಿ, ಗೋವುಗಳನ್ನು ರಕ್ಷಿಸಲು ನಾನಿದ್ದೇನೆ. ಅಮರೇಂದ್ರನ ಆಟೋಪಕ್ಕೆ ಅಂಜದಿರಿ. ಗಿರಿವರನು ನಿಮಗೀಗ ಅಭಯವನ್ನು ಕೊಡುತ್ತಾನೆ. ಗೋಪ ಗೋಪಿಯರೆಲ್ಲ ಬನ್ನಿ" ಎಂದು ಕೂಗಿಹೇಳಿದನು.

ಕೃಷ್ಣನ ಕರೆಯನ್ನು ಕೇಳಿ ಹರ್ಷೋತ್ಫುಲ್ಲ ಮಾನಸರಾದ ಗೋಪ ಗೋಪಿಯರು ಪ್ರವಾಹದಲ್ಲಿ ಈಸುತ್ತ ಕೃಷ್ಣನ ಬಳಿ ಸಾರಿದರು. ಹಸುಗಳು ತಮ್ಮ ಕರುಗಳೊಡನೆ ಕೃಷ್ಣನ ಸುತ್ತಾ ನೆರೆದುವು. ಕೃಷ್ಣನು ತನ್ನ ಎಡಗೈಯಿಂದ ಗೋವರ್ಧನ ಪರ್ವತವನ್ನು ಹಿಡಿದೆತ್ತಿ ಗೋಪ ಗೋಪಿಯರಿಗೂ ಹಸುಗಳಿಗೂ ನೆರಳನ್ನು ಕಲ್ಪಿಸಿದನು. "ಈ ಗಿರಿ ನನ್ನಕೈಯಿಂದ ಬೀಳದು. ಅಂಜದೆ ಎಲ್ಲರೂ ಇದರಡಿಗೆ ಬನ್ನಿ, ಮಳೆನಿಲ್ಲುವವರೆಗೆ ಎಲ್ಲರೂ ಇಲ್ಲಿಯೇ ನಿಲ್ಲಿ" ಎಂದು ಹೇಳಿ ಕೃಷ್ಣನು ಆ ಬೆಟ್ಟವನ್ನು ಕೊಡೆ ಹಿಡಿಯುವಂತೆ ಹಿಡಿದುಕೊಂಡು ನಿಂತುಬಿಟ್ಟನು. ಆಗ ಎಲ್ಲರೂ ತಮ್ಮ ತಮ್ಮ ಮನೆಯನ್ನು ಪ್ರವೇಶಿಸುವಂತೆ ನಿಶ್ಚಿಂತೆಯಿಂದ ಆ ಬೆಟ್ಟದಡಿಯಲ್ಲಿ ಹೊಕ್ಕುಬಿಟ್ಟರು. ಗೋವುಗಳೂ ಅಲ್ಲಿಯೇ ಬೀಡಾರಮಾಡಿದುವು. ಇಂದ್ರನ ಸಾಹಸ ನಡೆಯಲಿಲ್ಲ. ಅವನ ಮಳೆಗೆ ಯಾರೂ ಇನ್ನು ಅಂಜದಾದರು. ಏಳುದಿನ ಪರ್ಯಂತ ಶ್ರೀಕೃಷ್ಣನು ಬೆಟ್ಟವನ್ನು ಹಿಡಿದಿದ್ದನು. ಗೋಪರು ತಮ್ಮ ಹಸಿವು ಬಾಯಾರಿಕೆಗಳನ್ನೂ ಮರೆತು ಕೃಷ್ಣನನ್ನೇ ನೋಡುತ್ತ ನಿಂತುಬಿಟ್ಟರು. ಗೋಪಿಯರು ಕೃಷ್ಣನನ್ನು ಕುರಿತು ಹಾಡತೊಡಗಿದರು.

ಕೃಷ್ಣನು ಬೆಟ್ಟವನ್ನೆತ್ತಿದುದರಿಂದ ಇಂದ್ರನ ಗರ್ವದ ಬೇರನ್ನೇ ಕಿತ್ತೆಸೆದ ಹಾಗಾಯಿತು. ಗೋವಳನೊಬ್ಬನ್ನು ಬೆಟ್ಟವನ್ನು ಕಿತ್ತು ಗೋಪರಿಗೆ ರಕ್ಷೆಯೊದಗಿಸಿದ್ದನ್ನು ಕಂಡು ಅವನು ಗಾಬರಿಗೊಂಡನು. "ಆ ಅರ್ಭಕನು ಯಾರಿರಬಹುದು ? ಅವನ ತೋಳ ಬಲವಿನ್ನೆಷ್ಟು ? ಏಳು ದಿನಗಳಾದರೂ ಸೋಲದೆ ಬೆಟ್ಟವನ್ನು ಹೊತ್ತಿರುವನಲ್ಲಾ !" ಎಂದು ಇಂದ್ರನು ಬಹಳವಾಗಿ ಯೋಚಿಸಿದನು. ಕೃಷ್ಣನು ಮಹಾವಿಷ್ಣುವೆಂಬುದು ಆಗ ಅವನ ಮನಸ್ಸಿಗೆ ಹೊಳೆಯಿತು. ಇಂದ್ರನು ತನ್ನ ಮತಿಹೀನತೆಗೆ ನಾಚಿ ಮೇಘಜಾಲವನ್ನು ಹಿಡಿದು ಹಾಕಿದನು. ಧರೆಯ ದುರ್ದಿನವು ಅಡಗಿತು ; ಸೂರ್ಯ ದರ್ಶನವಾಯಿತು. ಗೋಕುಲದಲ್ಲಿ ಅಮಿತವಾದ ಉತ್ಸಾಹ ವುಂಟಾಯಿತು. ಗೋಪಾಲಕರು ಕೃಷ್ಣನ ಮಹಿಮೆಯನ್ನು ಕೊಂಡಾಡುತ್ತ ತಮ್ಮ ಗೋಧನದೊಡನೆ ಬೃಂದಾವನದ ತಮ್ಮ ಮನೆಗಳಿಗೆ ಹೊರಟರು. ಕೃಷ್ಣನು ಇಂದ್ರನ ಗರ್ವವನ್ನಿಳಿಸುವಂತೆ ಬೆಟ್ಟವನ್ನು ಕೆಳಗಿಳಿಸಿ ನೆನೆವವರ ಹೃದಯವನ್ನು ಹೊಗುವಂತೆ ಗೋಕುಲವನ್ನು ಹೊಕ್ಕನು.

ಅತ್ತ ಅಮರೇಂದ್ರನು ತನ ಅವಿವೇಕಕ್ಕೆ ಮರುಗಿದನು. ತನ್ನ ಮತಿಹೀನತೆಗೆ ದುಃಖಿಸುತ್ತ ಅವನು ಮಿತಪರಿವಾರದೊಡನೆ ಕೃಷ್ಣನ ಸನ್ನಿಧಿಗೆ ಬಂದು ಸಾಷ್ಟಾಂಗ ನಮಸ್ಕಾರಮಾಡಿದನು. "ನಮಗೆಲ್ಲರಿಗೆ ನೀನು ಒಡೆಯ. ನಿಮ್ಮಡಿಯ ಸೇವೆಯನ್ನು ಮಾಡುವ ಸಲುಗೆ ಲಭಿಸಿತೆಂಬ ಅಹಂಕಾರದಿಂದ ನಾನು ಕೆಟ್ಟೆನು. ನನ ಗರ್ವದಲ್ಲಿ ಒಡೆಯನನು ಗುರುತಿಸಲಾರದೆ ಕೆಟ್ಟೆನು." ಎಂದು ನುಡಿದು ಇಂದ್ರನು ಕೃಷ್ಣನ ಚರಣಕ್ಕೆರಗಿ ಕರುಣಿಸಬೇಕೆಂದು ಬೇಡಿಕೊಂಡನು. ಆಗ ಕೃಪಾನಿಧಿಯಾದ ಕೃಷ್ಣನು ಘನಗಂಭೀರ ಧ್ವನಿಯಿಂದ ಹೀಗೆ ಹೇಳಿದನು "ಮತ್ತರಿಗೆ ನನ್ನಲ್ಲಿ ಮತಿ ಪ್ರವರ್ತಿಸುವುದಿಲ್ಲ. ಮದಾಂಧರ ಮೇಲೆ ನನಗೆ ಮರುಕವಿಲ್ಲ. ಕತ್ತಲೆ ಬೆಳಕುಗಳಿಗೆ ಸ್ನೇಹ ಸಾಧ್ಯವೆ ? ನೀನು ಮೈಮರೆತಿರಲಾಗದೆಂದೇ ನಾನು ಈ ಯಜ್ಞವನ್ನು ತಪ್ಪಿಸಿ ಗಿರಿಗೆ ಪೂಜೆಮಾಡಿಸಿದೆನು. ಮನಸ್ಸಿನಲ್ಲಿ ಕೊರತೆಯಿಟ್ಟುಕೊಳ್ಳಬೇಡ. ಅಹಂಕಾರಕ್ಕೆ ಎಡೆಗೊಟ್ಟೆಯಾದರೆ ನೀನು ನನ್ನನ್ನು ಸೇರಲಾರೆ. ಹೋಗು ಮದಾಂಧನಾಗದೆ ನನ್ನ ಆಜ್ಞೆಯನ್ನು ನಿರ್ವಹಿಸುತ್ತ

ನಿನ್ನ ಅಧಿಕಾರದಲ್ಲಿ ನೀನಿರು.'' ಕೃಷ್ಣನ ಅನುಗ್ರಹದಿಂದ ಸಂತುಷ್ಟನಾಗಿ ಇಂದ್ರನು ಅಮರಾವತಿಗೆ ಹಿಂತಿರುಗಿದನು.

## ಕಾಳಿಯ ಮರ್ದನ

ಒಂದು ದಿನ ಕೃಷ್ಣ ಬಲರಾಮರು ಯಶೋದೆ ಬಡಿಸಿದ ಅಮೃತೋಪಮವಾದ ಅನ್ನವನ್ನುಂಡು ಕವಚಧಾರಿಗಳಾಗಿ ಗೋಪ ಬಾಲಕರೊಡನೆ ಬೃಂದಾವನದ ಬಳಿಯ ಕಾಡಿನ ಮಧ್ಯ ಪ್ರದೇಶವನ್ನು ಹೊಕ್ಕರು. ಹಲವು ಬಗೆಯ ಆಟಗಳನ್ನಾಡುತ್ತಾ ಗೋಪ ಕುಮಾರಕರು ಕೃಷ್ಣನ ಸಾನ್ನಿಧ್ಯ ಮಹಿಮೆಯಿಂದ ಪರಮಾನಂದ ಮಗ್ನರಾಗಿ ತಾವು ಎಲ್ಲಿಗೆ ಹೋಗುತ್ತಿರುವರೆಂಬುದನ್ನೇ ಮರೆತು ಕಾಡಿನಲ್ಲಿ ಸ್ವಚ್ಛಂದಚಾರಿಗಳಾಗಿ ಅಲೆದಾಡಿದರು. ಕೃಷ್ಣನು ಬಲರಾಮನನ್ನು ಹಿಂದಿಟ್ಟು ಕೆಲವರು ಸಂಗಡಿಗರೊಡನೆ ಕಾಳಿಂದಿಯೆಂಬ ಭಯಂಕರವಾದ ಮಡುವನ್ನು ಸಮೀಪಿಸಿದನು. ಆ ಮಡುವಿನಲ್ಲಿ ಕಾಳಿಂಗನೆಂಬ ಮಹಾಭಯಂಕರವಾದ ಸರ್ಪರಾಜನು ವಾಸಮಾಡುತ್ತಿದ್ದನು. ಅವನ ವಿಷದ ಉಸುರಿನಿಂದ ಆ ಮಡುವೆಲ್ಲ ವಿಷಮಯವಾಗಿತ್ತು. ಅಲ್ಲಿ ನೀರುಕುಡಿದ ಪ್ರಾಣಿಗಳಾವುವೂ ಜೀವದಿಂದುಳಿಯುತ್ತಿರಲಿಲ್ಲ. ಆ ಮಡುವಿನ ಮೇಲೆ ಹಾರಿದ ಹಕ್ಕಿಗಳು ವಿಷದ ಬೇಗೆಗೆ ಸಿಕ್ಕಿ ಸತ್ತು ಬೀಳುತ್ತಿದ್ದುವು. ಅಂದು ಬಿಸಿಲೇರಿದಾಗ ಗೋಪ ಕುಮಾರಕರು ಹಲವರು ಬಾಯಾರಿಕೆಯಿಂದ ಬಳಲಿ ಆ ಮಡುವಿನ ನೀರನ್ನು ಕುಡಿದು ಕೃಷ್ಣನ ಕಣ್ಣೆದುರಿನಲ್ಲಿಯೇ ಸತ್ತು ಬಿದ್ದರು. ಇನ್ನು ಕೆಲವರು ಮೂರ್ಛಿತರಾದರು. ಗೋವುಗಳ ಹಿಂಡುಹಿಂಡೇ ಪ್ರಾಣನೀಗಿತು.

ಈ ಅನರ್ಥಗಳನ್ನು ಕಂಡು ಕೃಷ್ಣನು ಇದೇನಿರಬಹುದೆಂದು ಯೋಚಿಸಿ ತನ್ನ ದಿವ್ಯದೃಷ್ಟಿಯಿಂದ ಎಲ್ಲ ವಿದ್ಯಮಾನಗಳನ್ನೂ ತಿಳಿದು "ಈ ಪಾಪಿ ಕಾಳಿಂಗನನ್ನು ಇಲ್ಲಿಂದ ಅಟ್ಟದಲ್ಲದೆ ಗೋಪರಿಗೆ ಕ್ಷೇಮವಿಲ್ಲ" ಎಂದು ನಿರ್ಧರಿಸಿಕೊಂಡನು. ಮನದಲ್ಲಿ ನಿರ್ಧರ ಬಂದ ಕೂಡಲೆ ಕೃಷ್ಣನು ತನ್ನ ಪೀತಾಂಬರವನ್ನು ಬಿಗಿದುಟ್ಟು, ಜುಟ್ಟನ್ನು ಗಂಟುಹಾಕಿಕೊಂಡು ಆ ವಿಷಜಲದ ನಡುವೆ ಬೆಳೆದಿದ್ದ ಒಂದು ದೊಡ್ಡ ಕಡಹದಮರದ ಕೊಂಬೆಯನ್ನು ಹಿಡಿದು ಅದರ ಮೇಲಕ್ಕೆ ಹಾರಿದನು. ಆ ಮರದ ಮೇಲಿನಿಂದ ಕೃಷ್ಣನು

ಆರ್ಭಟಿಸಿ ಆ ವಿಷಮಯವಾದ ಮಡುವಿನೊಳಕ್ಕೆ ಧುಮ್ಮಿಕ್ಕಲು ಮಡುವಿನ ನೀರು ದಡದ ಮೇಲಕ್ಕೆಲ್ಲ ಉಕ್ಕಿ ಹರಿಯಿತು. ಮಡುವಿನಲ್ಲಿ ಅಲ್ಲೋಲ ಕಲ್ಲೋಲವಾಯಿತು. ಮಂದರಧಾರಿಯು ಆ ಮಡುವನ್ನು ಮತ್ತೆ ಮತ್ತೆ ಮಹಾರಭಸದಿಂದ ಕಲಕಲು ಒಳಗಿದ್ದ ಕಾಳಿಂಗನು ಬಹಳ ಸಿಟ್ಟುಗೊಂಡು ಅತಿಯಾಗಿ ವಿಷವನ್ನು ಕಾರುತ್ತ ತನ್ನ ಬೀಡಾರದ ಶಾಂತಿಯನ್ನು ಹೀಗೆ ಭಂಗಪಡಿಸುತ್ತಿರುವವನಾರೆಂದು ತಿಳಿಯದೆ ರೋಷದಿಂದ ಮೇಲೆದ್ದನು. ಕೃಷ್ಣನ ಕಮನೀಯ ಮೂರ್ತಿಯನ್ನು ಕಂಡ ಕಾಳಿಂಗನು ಕೋಪದಿಂದ ಅವನನ್ನು ಸುತ್ತಿಕೊಂಡು ಬಿಟ್ಟನು. ಕೃಷ್ಣ ಕಾಳಿಂಗರಿಗೆ ಕ್ರೂರವಾದ ಕಾಳಗ ಮೊದಲಾಯಿತು.

ಇತ್ತ ಕೃಷ್ಣನನ್ನು ಅಗಲಿದ ಗೋಪಾಲಕರು ಬಲರಾಮನನ್ನು ಮುಂದಿಟ್ಟುಕೊಂಡು ವನದಲ್ಲೆಲ್ಲ ಹುಡುಕುತ್ತ ಕಾಳಿಂಗನ ಮಡುವಿನ ಬಳಿಗೆ ಬಂದು ಸೇರಿ ಅಲ್ಲಿ ಮೂರ್ಛಿತರಾಗಿ ಬಿದ್ದಿದ್ದ ಗೆಳೆಯರನ್ನೂ ಸತ್ತು ಬಿದ್ದಿದ್ದ ದನಕರುರಳನ್ನೂ ಕಂಡು ಗಾಬರಿಗೊಂಡರು. ಕೃಷ್ಣ ಕಾಣಿಸಲಿಲ್ಲ. ಗೋಪರು ಗೋಳಿಟ್ಟರು. ಈ ವೃತ್ತಾಂತ ತಿಳಿದು ನಂದಗೋಪಾದಿ ಸಮಸ್ತ ಗೋಕುಲ ನಿವಾಸಿಗಳೂ ಕಾತರ ಚಿತ್ತರಾಗಿ ಕಾಳಿಂದಿಯ ಬಳಿಗೆ ಓಡಿ ಬಂದರು. ಅಲ್ಲಿನ ಭಯಂಕರ ದೃಶ್ಯವನ್ನು ಕಂಡು ಸಮಸ್ತ ಗೋಪಗೋಪಿಯರೂ ತಲ್ಲಣಿಸಿದರು. "ಕೃಷ್ಣನೇನಾದನೋ" ಎಂದು ಅವರು ಭಯಭ್ರಾಂತರಾಗಿ ಚಿತ್ರ ಪ್ರತಿಮೆಗಳಂತೆ ನಿಂತಿದ್ದಾಗ ಕಾಳಿಂಗನನ್ನು ತುಳಿಯುತ್ತ ನೀರಲ್ಲಿ ಅವನೊಡನೆ ಕಾದಾಡುತ್ತಿದ್ದ ಕೃಷ್ಣನು ಕಾಣಿಸಿದನು! "ಕೃಷ್ಣಾವಲೋಕನ ಭಾಗ್ಯವಿಲ್ಲದಮೇಲೆ ನಮಗೆ ಜೀವವಿನ್ನೇಕೆ? ಎಂದು ಮರುಗುತ್ತಿದ್ದ ಗೋಪ ಗೋಪಿಯರು ಕೃಷ್ಣನನ್ನು ಕಂಡು ಸ್ವಲ್ಪ ಚೇತರಿಸಿಕೊಂಡರು. ಆದರೆ "ಆ ಭಯಂಕರ ಕಾಳಸರ್ಪದ ಹಿಡಿತಕ್ಕೆ ಸಿಕ್ಕಿರುವ ಕೃಷ್ಣ ಸುರಕ್ಷಿತನಾಗಿ ಬರುವ ಬಗೆ ಹೇಗೆ?" ಎಂಬ ಯೋಚನೆ ಅವರ ಮನಸ್ಸನ್ನು ಸುಡತೊಡಗಿತು.

ಭೋಗಿ ಭೋಗ ಪರೀತನಾದ ಕೃಷ್ಣನು ನಂದಾದಿ ಗೋಪರ ದುಃಖಾತಿಶಯವನ್ನು ಕಂಡು ಮರುಗಿ ಈ ನಾಟಕವನ್ನು ಇನ್ನು ಮುಗಿಸಬೇಕೆಂದು ನಿರ್ಣಯಿಸಿ ಆ ಮಹಾಸರ್ಪದ ಬಂಧನವನ್ನು ಬಿಡಿಸಿಕೊಂಡು ಮೇಲೆದ್ದನು.

ನಾಗೇಂದ್ರನು ಕೃಷ್ಣನ ಪಾದಹತಿಯಿಂದ ನೊಂದು ರೋಷದಿಂದ ಮತ್ತೆ ಅವನನ್ನು ಹಿಡಿಯಲು ಹವಣಿಸಿದನು. ಆದರೆ ಅದು ಶಕ್ಯವಾಗಲಿಲ್ಲ. ಕೃಷ್ಣನು ಆ ಮಡುವಿನಲ್ಲೆಲ್ಲ ಹರಿದಾಡಿ ಹಾವಿಗೆ ಸಿಕ್ಕದೆ ತಪ್ಪಿಸಿಕೊಳ್ಳುತ್ತಾ ಅದನ್ನು ಬಹಳವಾಗಿ ಆಯಾಸಪಡಿಸಿ ಇದ್ದಕ್ಕಿದ್ದಂತೆ ಅದರ ಹೆಡೆಯಮೇಲಕ್ಕೆ ಮತ್ತೆ ಹಾರಿ ಕುಣಿಯತೊಡಗಿದನು. ಕಾಳಿಂಗನ ಮೂಗು ಬಾಯಿಗಳಲ್ಲಿ ರಕ್ತಸುರಿಯಲಾರಂಭವಾಯಿತು. ಅವನು ನಿಶ್ಶಕ್ತಿಯಿಂದ ಮೂರ್ಛೆ ಹೋದನು. ಆಗ ಅವನ ಹೆಂಡಿರು ಕೃಷ್ಣಸನ್ನಿಧಿಗೆ ಬಂದು "ಸ್ವಾಮಿ, ವಿಷಧರಾಕೃತಿಯಾಗಿ ನೀನೇ ಸೃಷ್ಟಿಸಿ ಈಗ ಹೀಗೆ ಮುನಿದರೆ ನಮ್ಮಗತಿ ಯೇನು? ದಯೆಯಿಂದ ನಮ್ಮನ್ನು ಕಾಪಾಡು. ನಮಗೆ ಪತಿಭಿಕ್ಷೆ ಯನ್ನು ನೀಡು." ಎಂದು ಬೇಡಿಕೊಂಡರು. ಆ ವೇಳೆಗೆ ಮೂರ್ಛೆ ಯಿಂದೆಚ್ಚತ್ತ ಕಾಳಿಂಗನೂ ಕೃಷ್ಣನಿಗೆ ನಮಸ್ಕರಿಸಿ ಮರೆಹೊಕ್ಕನು. ಸರ್ವ ಜೀವದಯಾಪರನಾದ ಶ್ರೀಕೃಷ್ಣನು ಅವರಿಗೆ ಅಭಯದಾನಮಾಡಿ "ನಾಗ! ನೀನು ಇನ್ನು ಈ ಮಡುವಿನಲ್ಲಿರಲಾಗದು. ಈ ನೀರನ್ನು ಗೋವುಗಳು, ಗೋಪಾಲಕರು ಸ್ವೇಚ್ಛೆಯಾಗಿ ಬಳಸಲಿ. ನೀನು ನಿನ್ನ ಪರಿವಾರ ಸಮೇತ ನಾಗಿ ಸಾಗರಕ್ಕೆ ನಡೆ. ಅಂಜಬೇಡ. ನಿನ್ನ ಹೆಡೆಗಳಮೇಲೆ ನನ್ನ ಹೆಜ್ಜೆಯ ಗುರುತು ಬಿದ್ದಿದೆ. ಅದನ್ನು ಕಂಡರೆ ವೈನತೇಯನು ನಿನ್ನ ತಂಟೆಗೆ ಬರು ವುದಿಲ್ಲ. ಇಲ್ಲಿಂದ ನಿರಾತಂಕವಾಗಿ ಹೋಗು." ಎಂದು ನುಡಿದನು. ಕಾಳಿಂಗನೂ ಅವನ ಪತ್ನಿಯರೂ ಕೃಷ್ಣನನ್ನು ವಂದಿಸಿ ತಮ್ಮ ಹಲವು ಕಾಲದ ನಿವಾಸವನ್ನು ಬಿಟ್ಟು ಸಾಗರಕ್ಕೆ ಹೊರಟರು.

ಅಲ್ಲಿ ಸತ್ತು ಬಿದ್ದಿದ್ದ ಗೋಪಾಲಕರೆಲ್ಲ ಕೃಷ್ಣನ ಅನುಗ್ರಹದಿಂದ ನಿದ್ರೆ ಯಿಂದೆಚ್ಚೆತ್ತವರಂತೆ ಮೈಮುರಿದೆದ್ದರು. ಕೃಷ್ಣ ಸಂದರ್ಶನಮಾಡಿ ಗೋಪಾ ಲಕರು ಹರ್ಷೋನ್ಮತ್ತರಾದರು. ಗೋಪಿಯರು ಕೃಷ್ಣನ ಲೀಲೆಯನ್ನು ಹಾಡಿ ಹೊಗಳುತ್ತ ಜಗತ್ತನ್ನೇ ಮರೆತರು. ಬೃಂದಾವನದಲ್ಲಿ ಅಂದು ಮಹದಾನಂದ. ಎಲ್ಲೆಲ್ಲಿಯೂ ಜನ ನೃತ್ಯಗೀತೆಗಳಲ್ಲಿ ನಲಿಯತೊಡಗಿದರು. ಗೋಪಿಯರು ಕೃಷ್ಣನೊಡನೆ ರಾಸಕ್ರೀಡೆಯನ್ನಾಡಿದರು. ಗೋವುಗಳು ಕೂಡ ಈ ದಿವ್ಯದೃಶ್ಯವನ್ನುಕಂಡು ನಲಿದುವು!

# ಮಧುರಾ ಪ್ರವೇಶ

ಒಂದು ದಿನ ವೈಷ್ಣವ ಶಿರೋಮಣಿಯೆನಿಸಿದ ನಾರದನು ಹರಿನಾಮ ಘೋಷಣೆ ಮಾಡುತ್ತ ಕಂಸನ ಆಸ್ಥಾನಕ್ಕೆ ಬಂದನು. ಕಂಸನು ಸಿಂಹಾಸನದಿಂದ ಇಳಿದು ದೇವರ್ಷಿಯನ್ನಿದಿರುಗೊಂಡು ಸತ್ಕರಿಸಿ ಭದ್ರಾಸನ ದಲ್ಲಿ ಕುಳ್ಳಿರಿಸಿ ವಂದಿಸಿದನು. ನಾರದನು ಅವನನ್ನು ಆಶೀರ್ವದಿಸಿ "ಕಂಸ, ಇದೇಕೆ, ನಿನ್ನ ಮುಖ ಕಾಂತಿ ಹೀನವಾಗಿದೆ? ಏನು ಸಮಾ ಚಾರ?" ಎಂದು ಕೇಳಿದನು. "ಮುನಿವರನೆ, ನನ್ನ ವ್ಯಥೆಯನ್ನೇನೆಂದು ಹೇಳಲಿ, ತಮಗೆ ವೃಥಾ ಕರ್ಣವ್ಯಥೆ, ನನ್ನ ಗೋಳಿನ ಕಥೆ. ತಾವು ಕೇಳಿದ್ದರಿಂದ ಹೇಳುತ್ತೇನೆ. ಚಿತ್ತವಿಸಬೇಕು. ನನ್ನ ತಂಗಿಯ ಮಗನ ದೆಸೆಯಿಂದ ನನಗೆ ಅವಸಾನವೆಂದು ಅಶರೀರವಾಣಿ ನುಡಿದಂದಿನಿಂದ ನನಗೆ ಮನೋವ್ಯಥೆಯಾಗಿದೆ. ತಂಗಿಯ ಮಗಳೊಬ್ಬಳನ್ನು ನಾನು ಕೊಲ್ಲಲು ಪ್ರಯತ್ನಿಸಿದರೆ ನಭಕ್ಕೆ ಹಾರಿಹೋದಳು. ಹೋಗುತ್ತಾ ಹೋಗುತ್ತಾ ಅವಳು ನನ್ನ ಕೊಲೆಗಾರನು ಧರಣಿಯಲ್ಲಿ ಬೇರೊಂದೆಡೆಯಲ್ಲಿ ಹುಟ್ಟಿ ಬೆಳೆಯುತ್ತಿ ರುವನೆಂದು ಹೇಳಿ ಹೋದಳು. ಬಯಲ ಮಾತು ನನ್ನನ್ನು ಹೀಗೆ ಭಂಗ ಪಡಿಸಿತು. ಆ ನನ್ನ ಅಜ್ಞಾತಶತ್ರುವನ್ನು ಪತ್ತೆಮಾಡಿ ಕೊಲ್ಲುವುದಕ್ಕೆಂದು ಬಕ, ವತ್ಸಧೇನುಕರೇ ಮೊದಲಾದ ಅನೇಕ ಪಟುಭಟರನ್ನು ಕಳುಹಿಸಿದೆ. ಆದರೆ ಅವರು ಯಾರೂ ಹಿಂತಿರುಗಲಿಲ್ಲ. ಅವರ ಪ್ರಾಣಾಪಹರಣಮಾಡಿ ದವರಾರೋ ಅದೂ ತಿಳಿಯಲಿಲ್ಲ. ತಮಗೆ ಆ ವಾರ್ತೆ ತಿಳಿದಿದ್ದರೆ ದಯೆ ಯಿಟ್ಟು ಅಪ್ಪಣೆ ಕೊಡಿಸಬೇಕು." ಎಂದು ಕಂಸನು ಪ್ರಾರ್ಥಿಸಿದನು.

ಆ ಮುನಿವರನು ಕಂಸನ ಮಾತುಗಳನ್ನು ಕೇಳಿ ನಸುನಗುತ್ತಾ "ಕೇಳಲಿ ಕಂಸ, ವಿಷ್ಣು ನಿನಗೆ ಸರಿಯೆ? ನಿನ್ನನ್ನಿದಿರಿಸಬಲ್ಲ ವೀರರಾ ರಿದ್ದಾರೆ? ಅನಿಮಿಷರ ಗಂಟಲ ಗಾಣವಲ್ಲವೆ ನೀನು? ನೀನಿದಕ್ಕೆ ಅಂಜ ಲೇಕೆ? ನಿನ್ನ ಆಳು ಮಡಿದ ವೃತ್ತಾಂತವನ್ನು ನನಗೆ ತಿಳಿದ ಮಟ್ಟಿಗೆ ಹೇಳು ತ್ತೇನೆ. ಕೇಳು. ಗೋಕುಲದಲ್ಲಿ ಇಬ್ಬರು ಹುಡುಗರು ಬೆಳೆಯುತ್ತಿ ದ್ದಾರೆ. ಅವರು ನಂದಗೋಕುಲದ ಬಾಲರೆಲ್ಲರಿಗಿಂತ ಚೆಲುವರು, ಅಧಿಕ ಭುಜಬಲಶಾಲಿಗಳು. ಅವರು ಲಕ್ಷ್ಮೀಲೋಲನ ಅಂಶದಿಂದ ಹುಟ್ಟಿದವ

ರೆಂದು ಕೇಳಿದ್ದೇನೆ. ದೇವಕಾರ್ಯವನ್ನು ಮಾಡುವುದಕ್ಕಾಗಿ ದೇವಕಿಯು ಹೊಟ್ಟೆಯಲ್ಲಿ ವಿಷ್ಣುವು ಹುಟ್ಟಲು ವಸುದೇವನೇ ಆ ಮಗುವನ್ನೊಯ್ದು ಗೋಕುಲದಲ್ಲಿ ರಹಸ್ಯವಾಗಿ ಇರಿಸಿಬಂದನು. ಆ ನಿನ್ನ ಜೀವಾಪಹರಣ ಪರಾಯಣನಾದ ವಿಗಡ ವಿಷ್ಣುವು ಗೋಕುಲದಲ್ಲಿ ಬೆಳೆಯುತ್ತಿದ್ದಾನೆ. ಭೂಭಾರ ಸ್ವರೂಪರಾದ ದುಷ್ಟ ಕ್ಷತ್ರಿಯ ವಂಶದ ಧೂಮಕೇತುಗಳಂತೆ ಕೃಷ್ಣ ಬಲರಾಮರು ನಂದನ ಮನೆಯಲ್ಲಿ ಬೆಳೆಯುತ್ತಿದ್ದಾರೆ. ನಿನ್ನ ಆಳುಗಳಾದ ಈ ದುರ್ಧರ್ಷ ದೈತ್ಯರೆಲ್ಲ ಅವರಿಂದಲೇ ಸತ್ತರು. ಆ ಉದ್ದಾಮ ಬಾಲಕರು ಇವರನ್ನು ತಮ್ಮ ಬಾಲಲೀಲೆಯಿಂದಲೇ ಕೊಂದು ಹಾಕಿದರು. ನಿನ್ನ ಕೈಯಿಂದ ಗಗನಕ್ಕೆ ಹಾರಿಹೋದ ಚಂಡಿಕೆ ವಸುದೇವನ ಮಗಳಲ್ಲ. ಅವಳು ನಂದಗೋಪನ ಮಗಳು. ಬಲರಾಮನು ರೋಹಿಣಿಯ ಮಗ. ಕೃಷ್ಣನೇ ಮಹಾ ವಿಷ್ಣು. ಇನ್ನು ಮೋಸ ಹೋಗಬೇಡ.” ಎಂದು ನುಡಿದನು.

ನಾರದನ ಮಾತು ಕಿವಿಗೆ ಬೀಳುತ್ತಲೆ ಕಂಸನಿಗೆ ಮೇರೆಯರಿಯದ ಕೋಪ ಬಂತು. ಅವನು ಆ ಕ್ಷಣವೇ ವಸುದೇವವನನ್ನು ಸೀಳಿ ಕೊಲ್ಲುವ ಭರದಿಂದ ಕತ್ತಿಹಿರಿದು ಅವನ ಮುಂದಲೆಗೆ ಕೈ ಹಾಕಿದನು. ಕಾಲ ಭೈರವನಂತೆ ರೋಷದಿಂದ ಕರಾಳ ಮುಖನಾಗಿದ್ದ ಕಂಸನು ಹೂಂಕರಿಸುತ್ತ “ವಸುದೇವನನ್ನು ಸೀಳಿ ರಣ ಭೂತಾಳಿಗೆ ಬಲಿಯನಿಕ್ಕುವೆನೆಂದು” ಆರ್ಭಟಿಸಿದನು. ನಾರದನು ಗಾಬರಿಗೊಂಡನು. ಇನ್ನು ತಡಮಾಡಿದರೆ ಕೆಲಸ ಕೆಟ್ಟೀತೆಂದು ಅಂಜಿ ಅವನು ಕಂಸನನ್ನು ತಡೆದು “ಕಂಸ, ದಡ್ಡನಾಗಬೇಡ. ಕೋಪವನ್ನು ನುಂಗಿಕೋ. ಸಿಟ್ಟನ್ನು ಹೊರಗೆಡಹುವ ಕಾಲವಿದಲ್ಲ. ವಸ್ತು ಸ್ಥಿತಿಯನ್ನು ಗಮನಿಸದೆ ನೀನು ಇವನನ್ನು ಕೊಂದರೆ ಕೃಷ್ಣ ಬಲರಾಮರು ನಿನಗೆ ಸಿಕ್ಕುವರೆ? ಆತುರಪಡಬೇಡ. ಕೊಂಚ ಯೋಚಿಸಿ ಕೆಲಸ ಮಾಡು” ಎಂದು ಹೇಳಿ ಹೊರಟು ಬಿಟ್ಟನು.

ಕಂಸನು ನಾರದರ ಉಪದೇಶವನ್ನು ಕೇಳಿ ಕೊಂಚ ಶಾಂತನಾಗುತ್ತಲೆ ಅವನ ಮಂತ್ರಿಗಳು “ರಾಯನೆ! ತಲೆಯನ್ನು ಹಾಗೆಯೇ ಬಿಟ್ಟು ಕಾಳೋರಗನ ಬಾಲವನ್ನು ಕತ್ತರಿಸಿ ಬದುಕ ಬಹುದೆ? ನಿನ್ನ ವೈರಿ

ಯೆನಿಸಿದ ಕೃಷ್ಣನು ಬಲಿಯುತ್ತಿರುವಾಗ ಅವನ ತಂದೆಯನ್ನು ಕೊಲ್ಲಬಾರದು. ಅವನನ್ನು ಸೆರೆಯಲ್ಲಿಡು. ದೇವಕಿಯನ್ನು ಸೆರೆಗೆ ತಳ್ಳು. ಆಮೇಲೆ ನಿನ್ನ ಅಳಿಯಂದಿರನ್ನು ಇಲ್ಲಿಗೆ ಕರೆಸಿ ಕೊಲ್ಲಿಸು.'' ಎಂದು ಸಲಹೆ ಹೇಳಿದರು. ದುರುಳ ಕಂಸನು ಕೂಡಲೆ ದೇವಕಿ ವಸುದೇವರನ್ನು ಸೆರೆಯಲ್ಲಿಡಿಸಿದನು. ಆ ಕೂಡಲೆ ಅವನು ಕೇಶಿಯೆಂಬ ರಕ್ಕಸನನ್ನು ಕೃಷ್ಣ ಬಲರಾಮರ ವಧೆಗೆ ನಿಯಮಿಸಿ ಗೋಕುಲಕ್ಕೆ ಕಳುಹಿಸಿದನು.

ಕೇಶಿಯನ್ನು ಗೋಕುಲಕ್ಕೆ ಕಳುಹಿಸಿದಮೇಲೆ ಕಂಸನು ಚಾಣೂರ ಮತ್ತು ಮುಷ್ಟಿಕರೆಂಬ ಮಲ್ಲ ಶ್ರೇಷ್ಠರನ್ನು ಕರೆಸಿ ಓಲಗಗೊಡುತ್ತ ಹೀಗೆ ಹೇಳಿಕೊಂಡನು. "ನಾರದಮಹರ್ಷಿಯು ಹೇಳಿದ ಕಥೆಯನ್ನು ನೀವು ಕೇಳಿದಿರಲ್ಲವೆ? ಗೋಪಾಲಕರಿಬ್ಬರು ನಮ್ಮ ಭಟರನೇಕರನ್ನು ಕೊಂದರೆಂಬ ಕಥೆ ಕೇಳಿ ನಾಚಿಕೆಯಾಗಿದೆ. ಈಗ ಅವರನ್ನು ತೀರಿಸಲೆಂದು ನಮ್ಮ ಕೇಶಿಯನ್ನು ಕಳುಹಿಸಿದ್ದೇನೆ. ಅವನು ರಣದಲ್ಲಿ ಅವರನ್ನು ಕೊಲ್ಲದೆ ಬಿಡಲಾರ. ಒಂದುವೇಳೆ ಶತ್ರುಗಳು ಉಳಿದುಕೊಂಡರೆ ಅವರನ್ನು ಇಲ್ಲಿಗೆ ಉಪಾಯದಿಂದ ಕರೆಸುತ್ತೇನೆ. ನೀವು ಮಲ್ಲಕಾಳಗದಲ್ಲಿ ಅವರನ್ನು ಕೊಲ್ಲಬೇಕು. ಈ ಮಲ್ಲಕಳದ ಸುತ್ತಲೂ ನೋಟಕರಿಗೆ ಸ್ಥಳಮಾಡಿ ಮಂಚಗಳನ್ನಿಕ್ಕಿರಿ. ಎಲ್ಲ ಪುರಜನ ಪರಿಜನರೂ ನೋಡುತ್ತಿರುವಾಗಲೇ ನೀವು ಅವರನ್ನು ಮಲ್ಲ ಯುದ್ಧದ ನೆಪದಲ್ಲಿ ಕೊಲ್ಲಬೇಕು."

ಕಂಸನ ಈ ಆಜ್ಞೆಯನ್ನು ಕೇಳಿಯಾದಮೇಲೆ ಒಬ್ಬ ಮಲ್ಲನು "ಜೀಯಾ, ಆ ಹುಡುಗರನ್ನು ಕೊಲ್ಲುವುದು ಯಾವ ದೊಡ್ಡ ಕೆಲಸ? ಅದು ನಮ್ಮ ಅಳವಿಗೆ ಮೀರಿದ್ದೇನೂ ಅಲ್ಲ. ಆದರೆ ನಮಗೆ ಮನಸ್ಸಿನಲ್ಲಿ ಒಂದು ಸಂದೇಹ ಬಾಧಿಸುತ್ತಿದೆ. ಅವರು ನಿಮಗೆ ಅಳಿಯಂದಿರು. ಅವರ ಮೇಲೆ ನಾವು ಕೈಮಾಡಿದರೆ ತಮಗೆ ಅಪ್ರಿಯವಾದೀತೆಂದು ಅಂಜುತ್ತೇವೆ" ಎಂದು ತನ್ನ ಮನದ ಸಂಶಯವನ್ನು ತೋಡಿಕೊಂಡನು.

"ಅಯ್ಯಾ, ನಿಮಗೆ ಆ ಸಂಶಯ ಬೇಡ. ನನಗೆ ಅವರು ಪರಮ ವೈರಿಗಳೇ ಹೊರತು ಬೇರೆಯಲ್ಲ. ನಾನು ಅವರನ್ನು ಅರಮನೆಯ ಮುಂದುಗಡೆ ಆನೆಯಿಂದ ತುಳಿಸಿ ಕೊಲ್ಲಿಸಲು ಏರ್ಪಡಿಸಿದ್ದೇನೆ. ಅದರಿಂದಲೂ ತಪ್ಪಿಸಿಕೊಂಡು ಬಂದರೆ ನೀವು ಕೊಲ್ಲಬೇಕು." ಹೀಗೆ ಹೇಳಿ ಕಂಸನು

ಮಲ್ಲವಾವಂತರನ್ನೆಲ್ಲ ಕಳುಹಿಸಿಬಿಟ್ಟು ಬಲರಾಮ ಕೃಷ್ಣರನ್ನು ಗೋಕುಲ ದಿಂದ ಕರೆತರಬಲ್ಲ ಮತಿವಂತರಾರಿದ್ದಾರೆಂದು ಯೋಚಿಸತೊಡಗಿದನು. ಯಾದವರಿಗೆ ಬಹಳ ಪ್ರೀತ್ಯಾಸ್ಪದನಾದ ಅಕ್ರೂರನೇ ಈ ಕೆಲಸಕ್ಕೆ ಸಮರ್ಥ ನೆಂದು ಬಗೆದು ಅವನನ್ನು ಮರ್ಯಾದೆಯಿಂದ ಅರಮನೆಗೆ ಬರಮಾಡಿ ಕೊಂಡು ಏಕಾಂತದಲ್ಲಿ ಅವನೊಡನೆ ಹೀಗೆ ಹೇಳಿದನು.

"ಭೋಜಕುಲವರ್ಧನನೆ, ನಿನ್ನಂತೆ ಹಿತವರೂ ಮತಿವಂತರೂ ಆದ ವರು ಬೇರೆ ಯಾರಿದ್ದಾರೆ? ನನ್ನ ಕಾರ್ಯ ಸಾಧನೆಗೆ ನೀನು ನೆರವಾಗಬೇಕು. ನನ್ನ ಪ್ರಾರ್ಥನೆಯನ್ನು ತಿರಸ್ಕರಿಸಬೇಡ. ಗೋಕುಲದಲ್ಲಿ ನಂದನ ಪೋಷ ಣೆಯಲ್ಲಿರುವ ಬಲರಾಮ ಕೃಷ್ಣರಿಬ್ಬರೂ ವಸುದೇವನ ಮಕ್ಕಳೆಂದು ನಿನ್ನೆ ನಾರದನು ಹೇಳಿದನಷ್ಟೆ? ಕೃಷ್ಣನೇ ಮಹಾ ವಿಷ್ಣು. ಅವನು ನನಗೆ ಮೃತ್ಯುಸ್ವರೂಪನಾಗಿ ಹುಟ್ಟಿದ್ದಾನೆ. ಅವನನ್ನು ಈಗಲೇ ತೀರಿಸದಿದ್ದರೆ ಮುಂದೆ ನನಗೆ ಅಸಾಧ್ಯನಾಗಬಹುದು. ಈ ಚತುರ್ದಶಿಯ ದಿನ ಬಿಲ್ಲ ಹಬ್ಬಕ್ಕೆಂದು ನೀನು ಅವರಿಬ್ಬರನ್ನೂ ಮಧುರೆಗೆ ಕರೆತಂದರೆ ನಾನು ಅವ ರನ್ನು ಹೇಗಾದರೂ ಮಾಡಿ ಕೊಲ್ಲಿಸುತ್ತೇನೆ. ಇಗೋ ಈ ರಾಜರಥದಲ್ಲಿ ನೀನು ಗೋಕುಲಕ್ಕೆ ಹೋಗಿ ಅವರಿಗೆ ನಂಬಿಕೆ ಹೇಳಿ ಆ ಕುಹಕಿಗಳನ್ನು ಕರೆದು ತಾ. ನೀನಲ್ಲದೆ ಈ ಕೆಲಸಮಾಡಬಲ್ಲವರು ಬೇರೊಬ್ಬರಿಲ್ಲ"

ಅಕ್ರೂರನು ಕಂಸನ ಪ್ರಾರ್ಥನೆಯನ್ನು ಕೇಳಿ ಉಭಯ ಸಂಕಟಕ್ಕೀಡಾ ದನು. ಅವನು ಕೃಷ್ಣದರ್ಶನಾಕಾಂಕ್ಷಿ. ಅದು ಲಭಿಸುವಂತಾದ್ದರಿಂದ ಸಂತೋಷ. ಆದರೆ ಕೃಷ್ಣಬಲರಾಮರನ್ನು ಈ ದುರುದ್ದೇಶದಿಂದ ಕರೆತರುವ ಕೆಲಸಕ್ಕೆ ತಾನು ಹೋಗಬೇಕಾಗಿ ಬಂದುದಕ್ಕೆ ದುಃಖ. ಆದರೆ ಅವನಿಗೆ ಬೇರೇನೂ ದಾರಿಯಿರಲಿಲ್ಲ; ಕಂಸನ ಮಾತಿಗೆ ಒಪ್ಪಿಕೊಂಡು ತನ್ನ ಮನೆಗೆ ಹಿಂತಿರುಗಿದನು. ಅಕ್ರೂರನು ಕೃಷ್ಣದರ್ಶನಕಾತರನಾಗಿ ಆ ರಾತ್ರಿಯನ್ನು ಬಹಳ ಕಷ್ಟದಿಂದ ಕಳೆದನು. ಎಂದಿಗೆ ಬೆಳಗಾದೀತು, ಎಂದಿಗೆ ತಾನು ಗೋಕುಲಕ್ಕೆ ಹೊರಟೇನು, ಎಂಬ ತೀವ್ರವಾದ ಆಸೆ ಅವನ ಮನಸ್ಸಿನಲ್ಲಿ ತಾಂಡವಮಾಡುತ್ತಿತ್ತು.

ಇರುಳು ಕಳೆಯಿತು. ಲೋಕದ ಕತ್ತಲು ಕಳೆದಂತೆಲ್ಲ ಅಕ್ರೂರನ ಹೃದಯವನ್ನಾವರಿಸಿದ್ದ ದುಃಖಾಂಧಕಾರವೂ ತೊಲಗಿತು. ಅವನು ಎದ್ದು

ಸಂಧ್ಯಾವಂದನಾದಿಗಳನ್ನು ಮಾಡಿ ಕೃಷ್ಣ ಪದಧ್ಯಾನ ತತ್ಪರನಾಗಿ ರಾಜರಥ ವನ್ನೇರಿ ಬೃಂದಾವನದತ್ತ ಹೊರಟನು. ಹಲವು ಶುಭಶಕುನಗಳಾದುವು. ಹೃದ್ಯವಚನಗಳು ಕೇಳಿಸಿದುವು. ಅಕ್ರೂರನು ಹರ್ಷಿತನಾಗಿ ಪ್ರಯಾಣ ಮಾಡಿದನು. ಬಲಗಣ್ಣು ಅದುರಲು ಅಕ್ರೂರನು ತನ್ನ ಇಷ್ಟಸಿದ್ಧಿಯಾಗು ವುದು ಖಂಡಿತವೆಂದು ಬಗೆದು ಸಂಭ್ರಮಪಟ್ಟನು. ಕಂಸನ ಆಜ್ಞೆಯಂತೆ ಬಂದನೆಂಬ ಕಾರಣದಿಂದ ಕೃಷ್ಣನು ತನ್ನನ್ನು ಆದರಿಸುವನೋ ಇಲ್ಲವೋ ಎಂದು ಒಂದುಕ್ಷಣ ಯೋಚಿಸಿ ಆ ಭಾಗವತೋತ್ತಮನು ಅಂಜಿದನು. ಆದರೆ ಉತ್ತರ ಕ್ಷಣದಲ್ಲಿಯೇ ಅವನು ಸರ್ವವ್ಯಾಪಿಯಾದ ಭಗವಂತನು ತನ್ನ ಮನಸ್ಸಿನ ಯೋಚನೆಗಳನ್ನರಿಯದಿರುವನೆ, ತನ್ನವರ ಮನೋಗತ ವನ್ನು ಅವನು ಆದರಿಸದಿರುವನೆ, ಎಂದು ಯೋಚಿಸಿಕೊಂಡು ಮತ್ತೆ ಧೈರ್ಯ ತಾಳುವನು. ಹೀಗೆ ಲಕ್ಷ್ಮೀಕಾಂತನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಾ, ಮಾರ್ಗಶ್ರಮವನ್ನು ಅರಿಯದೆ ಅಕ್ರೂರನು ಗೋ ಕು ಲ ದ ಸಮೀಪಕ್ಕೆ ಸಾಯಂಕಾಲದ ಹೊತ್ತಿಗೆ ಸೇರಿದನು.

ಗೋಕುಲದ ಹೆಬ್ಬಾಗಿಲ ಬಳಿ ಬಯಲಿನಲ್ಲಿ ಶ್ರೀ ಕೃಷ್ಣನ ಹಜ್ಜೆಗಳನ್ನು ಕಂಡೊಡನೆಯೇ ಅಕ್ರೂರನು ರಥದಿಂದಿಳಿದು ಆ ಹಜ್ಜೆಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿದನು. ಆ ಕೃಷ್ಣನ ಪಾದಸ್ಪರ್ಶವಾದ ಮಣ್ಣನ್ನು ತೆಗೆದು ಮೈಗೆ ಲೇಪನಮಾಡಿಕೊಂಡನು; ಮನದಣಿಯುವಂತೆ ಆ ಹಜ್ಜೆಗಳ ಮೇಲೆ ಹೊರಳಾಡಿದನು. ಮುಂದೆ ಬರುತ್ತಿರಲು ಗೋಪರ ಸಮೂಹ ಕಾಣಿಸಿತು. ಕೃಷ್ಣ ಲೀಲೆಗಳನ್ನು ಹಾಡಿ ಬಣ್ಣಿಸುತ್ತಿದ್ದ ಗೋಪಿಯರು ಕಾಣಿಸಿದರು. ಅಕ್ರೂರನು ಈ ಕೃಷ್ಣ ಭಕ್ತರಿಗೆ ಕೈ ಮುಗಿದು ಮುಂದೆ ಬರುತ್ತಿರಲು ದೂರ ದಲ್ಲಿ ಬಲರಾಮ ಕೃಷ್ಣರು ಕಾಣಿಸಿದರು. ನೀಲಾಚಲ ಕೈಲಾಸಗಳು ಒಟ್ಟಿಗೆ ಬರುತ್ತಿವೆಯೆಂಬಂತೆ ತೋರುವ ಅಚ್ಯುತ ಹಲಾಯುಧರನ್ನು ಅಕ್ರೂರನು ಕಂಡು ಆನಂದ ಪರವಶನಾದನು. ಕೂಡಲೆ ಅವನು ದೇಹ ಪ್ರಾಣಗಳೆರಡನ್ನೂ ದೇವರಿಗೆ ಒಪ್ಪಿಸುವವನಂತೆ ಕೃಷ್ಣನ ಪಾದಯುಗಳಕ್ಕೆ ದಂಡ ನಮಸ್ಕಾರ ಮಾಡಿದನು. ಕರುಣಾವನಧಿಯಾದ ಕೃಷ್ಣನು ಭಕ್ತನನ್ನು ತಲೆದಡವಿ ಹಿಡಿದೆತ್ತಿ ತಕ್ಕೈಸಿಕೊಂಡನು. ಅಡಿಗಡಿಗೆ ಅಕ್ರೂರನನ್ನು ಸಂತೈಸುತ್ತ, ಕಂಸನ ಕ್ರೂರ ವಚನಗಳನ್ನು ಕೇಳಿ ನಗುತ್ತ ಕೃಷ್ಣ ಬಲರಾಮರು ಅಕ್ರೂರ

ಸಮೇತರಾಗಿ ಮನೆಗೆ ಬಂದರು,

ಮನೆ ಸೇರುತ್ತಲೇ ಹರಿ ಬಲರಾಮರು ಅಕ್ರೂರನಿಗೆ ಅತಿಥಿ ಸತ್ಕಾರ ಮಾಡಿದರು; ಅವನ ಪಾದಗಳನ್ನು ತೊಳೆದು ಮಧುಪರ್ಕಾದಿಗಳನ್ನು ನೀಡಿ ಉಪಚರಿಸಿ ಅವನ ಮಾರ್ಗಾಯಾಸವನ್ನು ಪರಿಹರಿಸಿದರು. ಬಳಿಕ ಆ ಯದುಕುಲ ಶಿರಶ್ಶೇಖರರಾದ ಬಲರಾಮ ಕೃಷ್ಣರು ಆ ಭಾಗವತೋತ್ತಮನನ್ನು ಬಹು ವಿಧದ ಅನ್ನಪಾನಗಳಿಂದ ಸತ್ಕರಿಸಿದರು ಊಟವಾದ ಮೇಲೆ ಅವರು ಅಕ್ರೂರನೊಡನೆ ಸುಖಾಸೀನರಾಗಿ "ಅಯ್ಯಾ, ನಿನ್ನ ಬಾಂಧವರೆಲ್ಲ ಕುಶಲಿಗಳೇ ? ಇಂದು ನೀನು ಬಂದದ್ದು ನಮ್ಮ ಭಾಗ್ಯೋದಯ. ಇಂದಿನ ದಿನವೇ ಸುದಿನವಾಯಿತು" ಎಂದು ಹೇಳಿದರು.

"ಕೃಷ್ಣಾ, ನಿನ್ನ ದರ್ಶನದಿಂದ ನಾನು ಪುನೀತನಾದೆ. ಇಂದು ನನ್ನ ಮನೋರಥ ಸಿದ್ಧಿಯಾಯಿತು. ಆದರೆ ಕಂಸನ ದೆಸೆಯಿಂದ ನಮ್ಮ ಜನಕ್ಕೆ ಸಂಭವಿಸಿರುವ ಕೇಡನ್ನೇನೆಂದು ವರ್ಣಿಸಲಿ ? ಅನೇಕರು ನಗರ ವಾಸವನ್ನು ಬಿಟ್ಟು ಜೀವವಿನಾಶ ಭಯದಿಂದ ದೇಶ ತ್ಯಾಗ ಮಾಡಿದರು. ಮೊನ್ನೆ ನಾರದನು ಬಂದು ನೀವು ವಿಷ್ಣುವಿನ ಅಂಶದಿಂದ ಹುಟ್ಟಿದವರೆಂದೂ ದೇವ ಕಾರ್ಯ ಸಾಧನೆಗಾಗಿ ಭೂಲೋಕದಲ್ಲಿ ಅವತರಿಸಿರುವಿರೆಂದೂ ಆ ನೃಶಂಸನಾದ ಕಂಸನಿಗೆ ಹೇಳಿದನು ಆ ಕೂಡಲೆ ಅವನು ವಸುದೇವನನ್ನು ಕೊಂದುಬಿಡುವುದರಲ್ಲಿದ್ದನು. ಆದರೆ ನಾರದನು ಹೇಗೋ ಉಪಾಯದಿಂದ ಆ ಕೊಲೆಯನ್ನು ತಪ್ಪಿಸಿದನು. ವಸುದೇವ ದೇವಕಿಯರಿಗೆ ಸೆರೆಮನೆಯೇ ಮನೆಯಾಯಿತು. ಕೃಷ್ಣಾ, ತಂದೆ ತಾಯಿಗಳನ್ನೂ ಸೆರೆಯಲ್ಲಿಟ್ಟ ಕಂಸನ ಕಾಟವನ್ನೇನೆಂದು ವರ್ಣಿಸಲಿ ?" ಎಂದು ನುಡಿದು ತಾನು ಬಂದ ವೃತ್ತಾಂತವನ್ನೆಲ್ಲ ವಿವರಿಸಿ ಹೇಳಿದನು.

ಕಂಸನ ಸಂಕಲ್ಪವನ್ನು ಕೇಳಿ ಕೃಷ್ಣ ಬಲರಾಮರು ಗಹಗಹಿಸಿ ನಕ್ಕರು; ಅಕ್ರೂರನ ವ್ಯಥೆಯನ್ನು ಮಾಣಿಸಿದರು. ನಂದಗೋಪನಿಗೆ ಅಕ್ರೂರನು ಬಂದ ವೃತ್ತಾಂತವನ್ನು ತಿಳಿಸಿ ಬಿಲ್ಲ ಹಬ್ಬಕ್ಕೆ ಮಧುರಾ ನಗರಕ್ಕೆ ಹೋಗುವುದಾಗಿ ಶ್ರೀ ಕೃಷ್ಣನು ಹೇಳಲು ಅವನು ಸಮಸ್ತ ಗೋಪರನ್ನೂ ಕರೆದು ಕೃಷ್ಣನ ಪ್ರಯಾಣ ವಾರ್ತೆಯನ್ನು ತಿಳಿಸಿ ಸಮಸ್ತ ಗೋಪಾಲಕರೂ ಬಂಡಿಗಳನ್ನು ಹೂಡಿ ಗೋರಸದಧಿಘೃತ ಕಂದ ಮೂಲ ಫಲಾದ್ಯುಪಾಯನ

ಸಮೇತರಾಗಿ ಹೊರಡಬೇಕೆಂದು ಅಪ್ಪಣೆ ಮಾಡಿದನು. ಇದನ್ನು ಕೇಳು ತ್ತಲೇ ಅಶೇಷ ಗೋಪ ಸಮೂಹವೂ ನಂದನ ಮನೆಯ ಬಳಿ ಸೇರಿತು. ಮಧುರೆಗೆ ಹೋಗುವ ಸಂಭ್ರಮ ಹೆಚ್ಚಿತು. ಎಲ್ಲರೂ ಪ್ರಯಾಣ ಸಿದ್ಧತೆ ಯಲ್ಲಿ ತೊಡಗಿದರು.

ಈ ಸಮಾಚಾರವನ್ನೆಲ್ಲ ಕೇಳಿ ಗೊಪಿಯರು ಹೃತ್ತಾಪದಲ್ಲಿ ಮುಳುಗಿ ಹೋದರು. ಶ್ರೀ ಕೃಷ್ಣನ ಅಗಲಿಕೆಯ ಕಲ್ಪನೆಯೇ ಅವರಿಗೆ ದುರ್ಭರವಾ ಯಿತು. ಹಲವರು ವಿಷಾದ ಜ್ವರಿತರಾಗಿ ಮೂರ್ಛೆಗೊಳಗಾದರು. ಎಲ್ಲರೂ ಕಂಬನಿಗರೆಯುತ್ತ ಗೋಳಾಡಿದರು. "ಅಯ್ಯೋ ! ಕ್ರೂರಾತ್ಮ ನಾದ ಈತನಿಗೆ ಅಕ್ರೂರನೆಂದೇಕೆ ಹೆಸರಾಯಿತೋ ಕಾಣೆನಲ್ಲಾ ! ನಮ್ಮ ಶರೀರವನ್ನು ಇಲ್ಲಿ ಉಳಿಸಿ ನಮ್ಮ ಜೀವವನ್ನು ತೆಗೆದುಕೊಂಡು ಹೋಗು ತ್ತಿರುವ ಈ ಪಾತಕಿಯನ್ನು ಅಕ್ರೂರನೆಂದು ಕರೆಯಬಹುದೆ ?" ಎಂದು ಹಲವರು ಗೋಪಿಕೆಯರು ಕೃಷ್ಣನನ್ನು ಕರೆದೊಯ್ಯಲು ಬಂದು ಅಕ್ರೂರ ನನ್ನು ಬೈದರು. ಕೃಷ್ಣನನ್ನು ಮತ್ತೆ ಕಾಣುವೆವೋ ಇಲ್ಲವೋ ಎಂದು ಅವರು ಬಹಳ ಆರ್ತರಾಗಿ ಗೋಳಿಟ್ಟರು.

ಮರುದಿನ ಸೂರ್ಯೋದಯವಾಗುತ್ತಲೇ ಅಕ್ರೂರ ಬಲರಾಮರೊಡನೆ ರಥಾರೂಢನಾದ ಕೃಷ್ಣನು ನಂದ ಯಶೋದೆಯರನ್ನು ಬೀಳ್ಕೊಂಡು ಗೋಪಿ ಯರನ್ನು ಸಂತವಿಡುತ್ತ ತನ್ನ ಪ್ರಯಾಣದ ನಿಮಿತ್ತವನ್ನು ಉಚಿತೋಕ್ತಿಗ ಳಿಂದ ತಿಳಿಸುತ್ತ ನಂದಗೋಕುಲವನ್ನು ಬಿಟ್ಟು ಮಧುರೆಗೆ ಪ್ರಯಾ ಣಹೊರಟನು. ಕಹಳೆ ಭೇರಿಗಳು ಗಂಭೀರವಾಗಿ ಮೊಳಗಿದವು. ಗೋಪಾ ಲಕ ಜನ ಬಂಡಿಗಳಲ್ಲಿ ಸಕಲ ಸಂಭಾರಗಳನ್ನೂ ತುಂಬಿಕೊಂಡು ಕೃಷ್ಣನ ಜತೆಯಲ್ಲಿ ಹೊರಟರು. ಗೋಪಿಯರು ಕೃಷ್ಣನ ಮೂರ್ತಿಯನ್ನೇ ನೋಡುತ್ತ ಚಿತ್ರ ಪ್ರತಿಮೆಗಳಂತೆ ನಿಂತುಬಿಟ್ಟರು. ಹರಿ, ಹರಿರಥ, ಆ ರಥದ ಧ್ವಜ ಶಿರ, ಕೊನೆಗೆ ಆ ರಥದ ದೂಳು ಆಕಾಶದಲ್ಲಿ ಕಾಣುವವರೆಗೆ ನೋಡುತ್ತ ನಿಂತಿದ್ದು ಆ ತರುವಾಯ ಗೋಪಿಯರು ಕೃಷ್ಣನು ಮರಳಿ ತಮ್ಮ ಮನೆಗೆ ಹಿಂತಿರುಗಿದರು. ಆ ಸರಸಿಜಾಕ್ಷಿಯರು ಅನವರತವೂ ಹರಿಚರಿತವನ್ನು ಹಾಡುತ್ತ ಇರುಳು ಹಗಲೆನ್ನದೆ ಕೃಷ್ಣಧ್ಯಾನ ಮಾಡುತ್ತ ಹೊತ್ತು ಕಳೆಯು ತ್ತಿದ್ದರು.

ಇತ್ತ ಅಕ್ರೂರನೊಡನೆ ಹೊರಟ ಬಲರಾಮಕೃಷ್ಣರು ಮಹಾ ವೇಗದಿಂದ ಪ್ರಯಾಣಮಾಡಿ ಗೋಪಜನ ಸಹಿತರಾಗಿ ಕಾಳಿಂದಿಯನ್ನು ದಾಟಿದರು. ದಾರಿಯುದ್ದಕ್ಕೂ ಜನರು ಕೃಷ್ಣ ದರ್ಶನಾಕಾಂಕ್ಷಿಗಳಾಗಿ ಉಪಾಯನಗಳೊಡನೆ ಕಾದಿದ್ದರು. ರಾಮಕೃಷ್ಣರ ಚೆಲುವ ಮೂರ್ತಿಗಳನ್ನು ಕಂಡು ನೇತ್ರಾನಂದವನ್ನನುಭವಿಸಿ ತಮ್ಮ ಜನ್ಮ ಸಫಲವಾಯಿತೆಂದು ಆ ಜನರು ಹರ್ಷಪಟ್ಟರು. ಕೃಷ್ಣನು ಅವರನ್ನು ಕೃಪಾಪೂರಿತ ಕಟಾಕ್ಷವೀಕ್ಷಣದಿಂದ ಕೃತಾರ್ಥರನ್ನಾಗಿಸುತ್ತ ಪ್ರಯಾಣವಾಡಿ ಮಧುರಾ ನಗರದ ಹೊರವಳಯವನ್ನು ಸೇರಿದರು. ಅಲ್ಲಿನ ವನದಲ್ಲಿ ನಂದಾದಿ ಗೋಪರು ಬಂಡಿಗಳನ್ನು ಬಿಟ್ಟು ಬೀಡಾರ ಮಾಡಿದರು. ಆ ವೇಳೆಗೆ ರಾಮಕೃಷ್ಣರು ಅಕ್ರೂರನೊಡನೆ ಅಲ್ಲಿಗೆ ಬಂದು ಗೋಪರೊಡನೆ ಸೇರಿಕೊಂಡರು.

ಕೃಷ್ಣನು ಗೋಪರ ಬಿಡಾರದಲ್ಲಿ ನಿಂತು ಅಕ್ರೂರರನ್ನು ಕಂಸನ ರಥದೊಡನೆ ಮಧುರೆಯೊಳಕ್ಕೆ ಕಳುಹಿಸಿದನು. ಅಕ್ರೂರನು ಕೃಷ್ಣನನ್ನು ಅಗಲಿ ಹೋಗಲಾರದೆ ಕಣ್ಣೀರಿಡಲು ಕೃಷ್ಣನು ಅವನನ್ನು ಸಂತೈಸುತ್ತ “ ಅಯ್ಯಾ ತಪ್ಪದೆ ನಾನು ಪರಿವಾರದೊಡನೆ ನಿನ್ನ ಮನೆಗೆ ಬರುತ್ತೇನೆ. ಸಂಶಯ ಬೇಡ. ಮೊದಲು ಈ ಕುಹಕಿ ಕಂಸನನ್ನು ಕೊಂದು ಅಖಿಲ ಬಾಂಧವರನ್ನೂ ಸಂತಯಿಸಬೇಕಾಗಿದೆ. ಅನಂತರ ಉಳಿದ ವಿಚಾರ. ನನ್ನ ಭಕ್ತರ ಮನೆಯ ಊಟದಲ್ಲಿ ನನಗೆ ತೃಪ್ತಿಯಾಗುವಂತೆ ಅಗ್ನಿಹೋತ್ರದಿಂದಲೂ ಆಗದು. ತಪ್ಪದೆ ನಿನ್ನ ಮನೆಗೆ ಬರುತ್ತೇನೆ. ನಿಶ್ಶಂಕೆಯಿಂದ ಮನೆಗೆ ಹೋಗು ” ಎಂದು ಹೇಳಿ ಅವನನ್ನು ಕಳುಹಿಸಿಕೊಟ್ಟು ಆ ಸಂಜೆ ಗೋಪರ ಜತೆಯಲ್ಲಿ ವಿನೋದ ಕೇಳಿಗಳನ್ನು ಸಲ್ಲಿಸಿ ಸಂತೋಷಮಗ್ನರಾಗಿದ್ದು ಕತ್ತಲಾಗುತ್ತಲೂ ಗೋಪರೊಡನೆ ಮಧುರಾನಗರವನ್ನು ಪ್ರವೇಶಿಸಿದನು.

ಕೃಷ್ಣಬಲರಾಮರು ಅಕ್ರೂರನೊಡನೆ ಬಂದೇಬರುವರೆಂಬ ಯೋಚನೆಯಿಂದ ಮಧುರಾನಿವಾಸಿಗಳು ಅಲ್ಲಲ್ಲಿ ಚಪ್ಪರಗಳನ್ನೇರಿಸಿ ನೆಲವನ್ನು ಸಾರಿಸಿ ರಂಗವಲ್ಲಿಯನ್ನಿಟ್ಟು ಅಲಂಕರಿಸಿದ್ದರು ; ಗುಡಿ ತೋರಣಗಳನ್ನೇರಿಸಿ ಕೃಷ್ಣನನ್ನು ಸ್ವಾಗತಿಸಲು ಸಂಸಿದ್ಧರಾಗಿದ್ದರು. ಮಧುರಾವಾಸಿಗಳ ಈ ಸಂಭ್ರಮವನ್ನು ಕಂಡು ಸಂತೋಷಿಸಿ ಕೃಷ್ಣನು ಮುಂದೆ ಹೊರಡಲು ಕಂಸನ ಅಧೀನ ರಾಜರೇ ಮೊದಲಾದವರು ಅರಮನೆಯಿಂದ ಹಿಂತಿರುಗುತ್ತಿದ್ದುದನ್ನು

ಕಂಡನು. ಇನ್ನು ಕೊಂಚ ಮುಂದೆ ಹೋಗುವಷ್ಟರಲ್ಲಿ ಮಧುರೆಯ ಪ್ರ
ಜನರು ಕೆಲವರು ಕೃಷ್ಣನನ್ನು ಗುರುತಿಸಿ ಅವನಿಗೆ ಅರ್ಘ್ಯಪಾದ್ಯಾದಿಗಳನ
ಕೊಟ್ಟು ಸತ್ಕರಿಸಿ ನಮಸ್ಕಾರ ಮಾಡಿದರು. ನದಿಗಳು ಸಾಗರ ಜಲವನ
ಸೇರಿ ಹಿಂತಿರುಗಲಾರದೆ ಹೋದಂತೆ ಕೃಷ್ಣನ ಅಂಗಲಕ್ಷ್ಮಿಯನ್ನು ಸೇರಿ
ಪುರಜನರ ನೋಟವು ಹಿಂತಿರುಗಲಾರದೆ ಹೋಯಿತು. ಆ ಜನಸ್ತೋ
ಮವು ಕೃಷ್ಣನನ್ನು ಕಣ್ಣಾಣಿಯೆ ನೋಡುತ್ತ ನಿಶ್ಚಲರಾಗಿ ನಿಂತುಬಿಟ್ಟರ
ಕೃಷ್ಣಬಲರಾಮರು ಅವರ ಪ್ರೀತಿ ಪೂರ್ವಕವಾದ ಸತ್ಕಾರವನ್ನು ಸ್ವೀಕರ
ಅವರನ್ನು ಕೃತಾರ್ಥರನ್ನಾಗಿಸಿ ಮುಂದೆ ಹೊರಡಲು ಪರಿಜನ ಸಹಿತನಾ
ಸಂಭ್ರಮದಿಂದ ಬರುತ್ತಿದ್ದ ರಾಜ ರಜಕನನ್ನು ಕಂಡರು.

ಮಾನೆಗಳನ್ನು ಹುರಿಮಾಡಿಕೊಳ್ಳುತ್ತ ಬಿಂಕದಿಂದ ಬರುತ್ತಿದ್ದ
ಅಗಸನನ್ನು ಕೃಷ್ಣನು ಮಾತನಾಡಿಸಿದನು. " ನಮ್ಮನ್ನು ಬಲ್ಲವನಾ
ಮಾತನಾಡಿಸದೆ ಮೌನದಿಂದ ಹೋಗುತ್ತಿರುವೆಯೇಕೆ? ನಿಲ್ಲು. ನಾ
ನಿನ್ನ ಒಡೆಯನಿಗೆ ಅಳಿಯಂದಿರಲ್ಲವೆ? ನೀನು ಅಗಸರಲ್ಲಿ ಬಹಳ ಶ್ರೇಷ್ಠ
ನಿನ್ನಲ್ಲಿರುವ ಮಡಿ ಬಟ್ಟೆಗಳಲ್ಲಿ ಉತ್ತಮವಾದುವನ್ನು ನಮಗೆ ಕೊಡು

" ಅಡವಿಯಲ್ಲಿ ಸಂಚರಿಸುವವರಿಗೆ ಯೋಗ್ಯವಾದ ಉಡಿಗೆಗಳು ನ
ಲ್ಲಿಲ್ಲ ಇವು ರಾಜವಸ್ತ್ರಗಳು. ಸುಮ್ಮನೆ ಆಸೆಪಡದಿರಿ. ಇವು ನಿವ
ಸಿಕ್ಕವು." ಎಂದು ಅಗಸನು ಮಾರ್ನುಡಿದನು. ಕೃಷ್ಣನು ಅ
ಬಿಡದೆ " ಎಲವೊ, ದೊರೆಯ ಅಗಸನೆಂದು ಬಹಳ ಗರ್ವಪಡಬೇ
ಒಳ್ಳೆಯ ಬಟ್ಟೆಗಳನ್ನು ಕೊಡಹೇಳಿದರೆ ದುರಹಂಕಾರದ ಮಾತನಾಡುವೆಯ
ಒಳ್ಳೆಯ ಮಾತಿನಿಂದ ಮಡಿವರ್ಗವನ್ನು ಕೊಟ್ಟರೆ ಸರಿ. ಇಲ್ಲದಿದ್ದರೆ ನಿ
ತಲೆ ಸಮೇತವಾಗಿ ವಸ್ತುಗಳೆಲ್ಲವನ್ನೂ ತೆಗೆದುಕೊಳ್ಳುತ್ತೇನೆ" ಎಂ
ಗದರಿಸಿದನು. ಆದರೆ ಅಗಸನು ಈ ಬೆದರಿಕೆಯ ಮಾತುಗಳಿಗೆ ಸೋಲಲಿ
ಕೃಷ್ಣನನ್ನು ಲಕ್ಷ್ಯಮಾಡದೆ ಅವನು ಮುಂದೆ ಹೊರಟನು. ಕೃಷ್ಣ
ಅವನನ್ನು ಹಿಡಿದು ಬೀಳಹೊಯ್ದು ಅವನ ತಲೆಯನ್ನು ಚಿವುಟಿ ಬಿಸಾಡ
ಉಳಿದವರು ದಿಕ್ಕೆಟ್ಟು ಓಡಿದರು. ಕೃಷ್ಣಬಲರಾಮರು ತಮಗೆ ಬೇಕ
ಉತ್ತಮ ವಸ್ತ್ರಗಳನ್ನು ತೆಗೆದುಟ್ಟುಕೊಂಡರು. ಅಗಸನಿಗಾದ ಪ್ರಾಯಶ್ಚಿ
ವನ್ನು ಕಂಡ ಮಧುರೆಯ ಪಟ್ಟಣಿಗರು. ಆ ಖಳನಿಗೆ ತಕ್ಕ ಶಿಕ್ಷೆಯಾ

ತೆಂದು ಸಂತೋಷಪಟ್ಟರು.

ಕೃಷ್ಣಬಲರಾಮರು ಪೀತಾಂಬರಗಳನ್ನುಟ್ಟು ಮಣಿ ಕುಂಡಲಗಳನ್ನು ಧರಿಸಿ ಗೋಪರ ಮಧ್ಯೆ ಮರಿಯಾನೆಗಳಂತೆ ಮೆರೆಯುತ್ತ ಮುಂದೆ ಹೊರಟರು. ಸುದಾಮನೆಂಬ ಮಾಲೆಗಾರನ ಮನೆ ಸಮೀಪಿಸಿತು. ರಾಮಕೃಷ್ಣರ ಬರವನ್ನು ಕಂಡು ಪರಮ ಭಕ್ತನಾದ ಸುದಾಮನು ಓಡಿ ಬಂದು ಅವರನ್ನು ಇದಿರುಗೊಂಡು ತನ್ನ ಮನೆಗೆ ಕರೆದುಕೊಂಡು ಹೋಗಿ ಆರಾಧಿಸಿದನು. ಅವನು ಪ್ರೀತಿಯಿಂದ ಕೊಟ್ಟ ಪುಷ್ಪಹಾರಗಳನ್ನು ಧರಿಸಿ ಮುಂದೆ ಹೊರಡಲು ಮುಂದೆ ಕುಬ್ಜೆಯೆಂಬವಳು ಹಲವು ಗಂಧಾನುಲೇಪನಗಳನ್ನು ಹೊತ್ತುಕೊಂಡು ಬಲರಾಮ ಕೃಷ್ಣರಿಗೆ ಎದುರಾಗಿ ಬಂದಳು. ಅವಳು ಹೆಸರಿನಲ್ಲಿ ಮಾತ್ರವಲ್ಲದೆ ಆಕಾರದಲ್ಲಿಯೂ ಕುಬ್ಜೆಯಾಗಿದ್ದಳು. ಗೂನು ಬೆನ್ನಿನ ಅವಳ ಕುರೂಪವನ್ನು ನೋಡಿ ಎಲ್ಲರೂ ಹಾಸ್ಯಮಾಡುತ್ತಿದ್ದರು. ಆದರೆ ಅವಳು ಸುಗಂಧ ದ್ರವ್ಯಗಳನ್ನು ತಯಾರಿಸುವುದರಲ್ಲಿ ದಕ್ಷಳಾಗಿದ್ದಳು. ಕಂಸನು ಅವಳು ಮಾಡಿದ ಪರಿಮಳಾನುಲೇಪನೆಗಳನ್ನೇ ಬಯಸುತ್ತಿದ್ದನು.

ಕೃಷ್ಣನು ಕುಬ್ಜೆಯನ್ನು ಸಂಬೋಧಿಸಿ "ಎಲೈ ಕಾಂತೆ, ನೀನಾರು? ಚೆಲುವೆಯಾದ ನೀನು ಈ ಪರಿಮಳ ಗಂಧವನ್ನು ಯಾರಿಗಾಗಿ ಕೊಂಡೊಯ್ಯುತ್ತಿರುವೆ? ನಾವು ರಾಜನ ಅಳಿಯಂದಿರು. ನಮಗೆ ನೀನು ಅನುಲೇಪನಗಳನ್ನಿತ್ತರೆ ನಿನ್ನ ಮನೋರಥವನ್ನು ಕೊಡಬಲ್ಲೆವು. ಸಂಶಯ ಬೇಡ." ಈ ಗಂಭೀರ ವಾಕ್ಯಗಳನ್ನು ಕುಬ್ಜೆಯು ತಲೆಯೆತ್ತಿ ನೋಡಿ ತನ್ನ ಪರಿಚಯವನ್ನು ಹೇಳಿಕೊಂಡು ತನ್ನ ಕೈಲಿದ್ದ ಸುಗಂಧ ದ್ರವ್ಯಗಳನ್ನು ಕೃಷ್ಣನಿಗೆ ನೀಡಿ "ನಿನ್ನ ಈ ಒಲವೇ ನನಗೆ ಸಾಕು. ನನ್ನ ಕರ್ಮಾಧೀನದಿಂದ ನನ್ನ ದೇಹ ವಕ್ರವಾಗಿ ತಿವಕ್ರೆಯೆಂಬ ಹೆಸರು ಪಡೆದಿದ್ದೇನೆ. ಇದನ್ನು ಹೋಗಲಾಡಿಸಲು ನೀನೇನು ವಿಧಾತ್ರನೆ? ನನಗೆ ಇನ್ನಾವ ಮನೋರಥ?" ಎಂದು ನುಡಿದಳು. ಕೃಷ್ಣ ಬಲರಾಮರು ಆ ಗಂಧಾನುಲೇಪನಗಳನ್ನು ತಮ್ಮ ಮನದಣಿಯುವಂತೆ ಲೇಪಿಸಿಕೊಂಡು ಜತೆಯ ಗೋಪರಿಗೆಲ್ಲ ಕೊಟ್ಟು ಓಕುಳಿಯಾಡಿ ನಲಿದರು. ಇಷ್ಟೆಲ್ಲ ಆದಮೇಲೆ ಕೃಷ್ಣ ಆ ಕುಬ್ಜೆಯನ್ನು ಮುಟ್ಟಿದ ಮಾತ್ರದಿಂದ ಅವಳು ಅಪ್ಸರ ಸ್ತ್ರೀಯರಿಗೂ ಮಿಗಿಲಾದ ಸೌಂದ

ರ್ಯವನ್ನು ಪಡೆದಳು. ಅವಳ ವಿಕಾರ ಮಾಯವಾಯಿತು! ಇದನ್ನೆಲ್ಲ ಕಂಡ ಪುರಜನ ಬೆರಗಾದರು.

ಬಿಲ್ಲಹಬ್ಬಕ್ಕೆಂದು ಬಂದು ಹೀಗೆ ವೃಥಾಕಾಲಹರಣ ಮಾಡಬಾರದೆಂದು ನುಡಿಯುತ್ತ ಆಯುಧಶಾಲೆಯನ್ನು ಸಮೀಪಿಸಿ ಅಲ್ಲಿದ್ದ ರತ್ನಖಚಿತವಾದ ಚಿನ್ನದ ಹಿಡಿಯಿಂದ ಕೂಡಿದ ನೃಪಕೋದಂಡವನ್ನು ಕಂಡು ಕೃಷ್ಣನು ಅದನ್ನು ಅಣ್ಣನಿಗೂ ಉಳಿದೆಲ್ಲ ಗೋಪರಿಗೂ ತೋರಿಸಿದನು. "ಖಂಡಪರಶುವಿನ ಆಣೆಗೂ ಇದು ಕೌತುಕವಾದ ಬಿಲ್ಲು. ಇದನ್ನು ನೋಡಿ ದೃಷ್ಟಿ ಸಫಲವಾಯಿತು. ಕೈಗಳು ಅದನ್ನು ಮುಟ್ಟಿ ಸಫಲವಾಗಬೇಡವೇ?" ಎಂದು ಹೇಳುತ್ತ ಕೃಷ್ಣನು ಆ ಬಿಲ್ಲಿಗೆ ಕೈಹಾಕಿದನು. ಕಾವಲ ಭಟರು ಅಂಜಿ ಕೂಗಾಡುತ್ತಿದ್ದರೂ ಲಕ್ಷ್ಯಮಾಡದೆ ಕೃಷ್ಣನು ಬಿಲ್ಲಿಗೆ ಬಾಣವನ್ನು ಹೂಡುವ ಪ್ರಯತ್ನದಲ್ಲಿ ತೊಡಗಿದನು. ಹೆದೆಯನ್ನು ಕಿವಿಯವರೆಗೆ ಎಳೆಯಲು ಧನುಸ್ಸು ತಟ್ಟನೆ ಮುರಿದು ಬಿತ್ತು. ಬಿದ್ದ ಶಬ್ದಕ್ಕೆ ಅಂತರಿಕ್ಷದಲ್ಲಿನ ದೇವತೆಗಳು ಅಂಜಿದರು. ಕಂಸನು ಬೆಚ್ಚಿ ಬಿದ್ದನು.

ಆಯುಧಶಾಲೆಯ ಕಾವಲು ಭಟರು ಕೃಷ್ಣನನ್ನು ಬೆನ್ನಟ್ಟಿ "ಕಟ್ಟು, ಹಿಡಿ, ಕೊಲ್ಲು. ಈ ದುಷ್ಟನನ್ನೇಕೆ ಒಳಕ್ಕೆ ಬಿಟ್ಟಿರಿ?" ಎಂದು ಕೂಗಾಡುತ್ತ ಓಡಿ ಬಂದರು. ಕೃಷ್ಣಬಲರಾಮರು ಮುಸಲ ಮುದ್ಗರ ಮುಸುಂಡಿ ಪಟ್ಟಿಸಾದಿ ಮಹಾಯುಧಗಳನ್ನು ಹಿಡಿದು ತಮ್ಮ ಮೇಲೆ ನುಗ್ಗಿ ಬರುತ್ತಿರುವ ಈ ಮಹಾಭಟ ಸಮೂಹವನ್ನು ಕಂಡು ನಸುನಗುತ್ತ ಆಯುಧಶಾಲೆಯ ಬಾಗಿಲ ಇಕ್ಕೆಲದಲ್ಲಿ ಒಬ್ಬೊಬ್ಬರೂ ಆ ಬಿಲ್ಲಿನ ತುಂಡೊಂದನ್ನು ಹಿಡಿದುಕೊಂಡು ನಿಂತು ಬಿಟ್ಟರು ನುಗ್ಗಿಬಂದ ಭಟರನ್ನೆಲ್ಲ ಹೊಡೆದುಕೊಂದು ಕಾಲನಿಗೆ ಕೈವಶಮಾಡಿ ರಾಮಕೃಷ್ಣರು ಯುದ್ಧ ವಿಜಯಿಗಳಾದರು. ತನ್ನ ಸೈನ್ಯದ ಪರಾಜಯದ ವಾರ್ತೆ ಕಂಸನೋಲಗಕ್ಕೆ ತಲಪಿತು. ಕಂಸನು ಕೋಪೋದ್ರಿಕ್ತನಾಗಿ ಚತುರಂಗ ಸೈನ್ಯವನ್ನೇ ಕೃಷ್ಣನ ಮೇಲೆ ಕಾಳಗಕ್ಕೆ ಕಳುಹಿಸಿದನು. ಆದರೆ ಕೃಷ್ಣಬಲರಾಮರು ಅವರನ್ನೆಲ್ಲ ನಿಗ್ರಹಿಸಿ ಆಯುಧಾಗಾರದಿಂದ ಹೊರಟು ಮಧುರೆಯ ಹೊರವಳಯದಲ್ಲಿದ್ದ ತಮ್ಮ ಬೀಡಿಗೆ ಬಂದು ಸೇರಿಕೊಂಡರು.

# ಕಂಸಮಥನ

ರಾಮಕೃಷ್ಣರ ಯುದ್ಧವಿಜಯದ ಸುದ್ದಿಯನ್ನೂ ಧನುರ್ಭಂಗದ ವಿಚಾರವನ್ನೂ ಕೇಳಿ ಕಂಸನಿಗೆ ಆ ರಾತ್ರಿಯೆಲ್ಲ ಜಾಗರಣೆಯಾಯಿತು. ಅವನು ಆ ಅಪರಾತ್ರಿಯಲ್ಲಿಯೇ ಮಲ್ಲರನ್ನೂ, ಮಾವಂತರನ್ನೂ ಕರೆಸಿ "ನನ್ನ ಮಾತಿನಂತೆ ಅಕ್ರೂರನು ಹೋಗಿ ವಸುದೇವನ ಈ ಕುಹಕಿ ಮಕ್ಕಳನ್ನು ಕರೆತಂದನು. ಇವರು ಸಾಮಾನ್ಯರಲ್ಲ. ಈ ಸಂಜೆಯೇ ನಗರದಲ್ಲಿ ಬೇಕಾದಷ್ಟು ಗಲಭೆ ಮಾಡಿದ್ದಾರೆ. ರಜಕನನ್ನು ಹೊಡೆದು, ಧನುಸ್ಸನ್ನು ಮುರಿದು ಆ ಬಿಲ್ಲಿನ ದಡಿಗಳನ್ನೇ ಹಿಡಿದು ಕಾಪಿನ ಭಟರನ್ನೂ ಸೈನ್ಯವನ್ನೂ ಕೊಂದಿದ್ದಾರೆ. ಅವರು ಪಟುಭಟರೇ ಸರಿ. ನೀವು ಅಲಕ್ಷ್ಯದಿಂದಿರತಕ್ಕದ್ದಲ್ಲ. ನಾಳಿನ ದಿನ ನೀವು ನಿಮ್ಮ ಸಮಸ್ತ ಶಕ್ತಿಸಾಹಸಗಳನ್ನೂ ಪ್ರಯೋಗಿಸಿ ಅವರನ್ನು ಕೊಲ್ಲಬೇಕು" ಎಂದು ಆಜ್ಞಾಪಿಸಿ ಅವರನ್ನು ಬೀಳ್ಕೊಟ್ಟು ರಾಮಕೃಷ್ಣರ ಯುದ್ಧ ಕೌಶಲವನ್ನೇ ನೆನೆಯುತ್ತ ಜಾಗರಣೆ ಮಾಡುತ್ತಿದ್ದನು. ಆಕಸ್ಮಾತ್ತಾಗಿ ಕ್ಷಣಕಾಲ ತೂಗು ಬಂದರೆ ಆಗ ಅವನಿಗೆ ಹಲವು ದುಸ್ವಪ್ನಗಳಾಗತೊಡಗಿದವು. ಸತ್ತವರನ್ನಪ್ಪಿದಂತೆ ಕನಸಾಗಲು ದಿಗ್ಗನೆಚ್ಚತ್ತು ಕಂಸನು ಗಾಬರಿಯಾಗುತ್ತಿದ್ದನು. ಮರಣ ಸಂಕಟವೊದಗಿದವನಂತೆ ಹಿಂಸೆಪಡುತ್ತ ಕಂಸನು ಬಹುಕಷ್ಟದಿಂದ ಕಾಲವನ್ನು ತಳ್ಳುತ್ತಿದ್ದನು.

ಖಳನ ಕರ್ಮಕ್ಷಯವಾದಂತೆ ಕತ್ತಲೆ ಕಳೆದು ಬೆಳಗಾಯಿತು. ಸೂರ್ಯನುದಿಸಿದನು. ಭೇರಿಗಳು ಮೊಳಗಿದವು. ಮಲ್ಲಕಳ ಸಿದ್ಧವಾಗಿತ್ತು. ಸುತ್ತಲೂ ಮಂಚಗಳನ್ನು ಹಾಕಿದ್ದರು. ಕಂಸನ ಮಲ್ಲರು ಕಾಳಗಕ್ಕೆ ಅಣಿಯಾಗಿ ನಿಂತಿದ್ದರು. ಅತ್ತ ಉಪವನದಿಂದ ಗೋಪರ ಸಮೂಹವು ಬಂದು ಅರಸನನ್ನು ಕಂಡು ಕಾಣಿಕೆಗಳನ್ನು ಕೊಟ್ಟು ಮಲ್ಲಕಳದ ಸುತ್ತಲೂ ಹಾಕಿದ್ದ ಮಂಚದ ಮೇಲೆ ಕುಳಿತು ಕೊಂಡರು. ಅಮೇಲೆ ಬಲಪುರುಷೋತ್ತಮರು ಭೋಜನ ಮಾಡಿ ಗೆಳೆಯರೊಡನೆ ಹೊರಟು ಕಂಸನ ಅರಮನೆಗೆ ಬಂದರು.

ಅರಮನೆಯ ಹೊರಬಾಗಿಲಲ್ಲೇ ಕೈಕಾಲುಗಳನ್ನು ಧರಿಸಿದ ಮೇರು ಪರ್ವತವೆಂಬ ಭ್ರಾಂತಿಯನ್ನುಂಟು ಮಾಡುವಂಥ ಕುವಲಯಾಪೀಡನೆಂಬ

ಒಂದು ಮಹಾಗಜವು ನಿಂತಿತ್ತು. ಕೃಷ್ಣನು ಬಂದುದನ್ನು ಕಂಡು ಪ್ರತ್ಯಕ್ಷ ಮೃತ್ಯುವೇ ಮೈಮುರಿದೆದ್ದಂತೆ ಅವರ ಮೇಲೆ ನುಗ್ಗಿ, ಸೊಂಡಿಲಿಂದ ಕೃಷ್ಣ ಬಲರಾಮರಿಬ್ಬರನ್ನೂ ಹಿಡಿಯಿತು, ಗೋಪಾಲಕರು ಬೆದರಿ ಚೀರಿದರು. ಆದರೆ ಅವರು ಆನೆಯ ಹಿಡಿತದಿಂದ ತಪ್ಪಿಸಿಕೊಂಡು ಅದರ ತಲೆಯಮೇಲೆ ಹೊಡೆಯಲು ರಕ್ತ ದಿಕ್ಕು ದಿಕ್ಕುಗಳಿಗೆ ಸಿಡಿಯಿತು ಕೃಷ್ಣನು ಆನೆಗೆ ಸಿಕ್ಕ ದಂತ ತಪ್ಪಿಸಿಕೊಂಡು ಅದರ ಕಾಲುಗಳ ಮಧ್ಯೆ ತೂರಿ ಬಚ್ಚಿಟ್ಟು ಕೊಳ್ಳಲು ಆನೆಯು ಕಾಣದ ಅಜ್ಞಾನಿಗಳು ವಿಷಯ ಸುಖಗಳಲ್ಲಿ ಮುಳುಗಿ ದೇವರನ್ನು ಹುಡುಕಲರಿಯದೆ ಒದ್ದಾಡುವ ಹಾಗೆ ಕೃಷ್ಣನನ್ನು ಹುಡುಕಿ ಕಷ್ಟಪಡುತ್ತಿತ್ತು. ಕೊಂಚಹೊತ್ತಾದ ಮೇಲೆ ಅದು ಆತ್ಮಜ್ಞಾನಿಗಳು ತಮ್ಮೊಳಗಿನ ದೇವರನ್ನು ಕಂಡುಕೊಳ್ಳುವಂತೆ ತನ್ನ ಮರೆಯುಲ್ಲಿಯೇ ಇದ್ದ ಕೃಷ್ಣನನ್ನು ಕಂಡು ಸೊಂಡಲಿನಿಂದ ಹಿಡಿದುಕೊಂಡಿತು. ದೇವತೆಗಳು ಅಂಜಿದರು. ಕೃಷ್ಣನೇನಾಗಿ ಹೋಗುವನೋ ಎಂದು ಗೋಪರು ಇದ್ದೂ ಸತ್ತಂತಾಗಿದ್ದರು. ಕೃಷ್ಣನು ಮಾವಂತನನ್ನು ಸದೆದು, ಆನೆಯ ಸೊಂಡಿಲನ್ನು ಕತ್ತರಿಸಿ ಅದರ ದಂತವನ್ನೇ ಮುರಿದುಕೊಂಡು ಆನೆಯನ್ನು ಹೊಡೆದು ಕೆಡವಿದನು. ಇಂದ್ರನು ವಜ್ರಾಯುಧದಿಂದ ಹೊಡೆಯಲು ಗಿರಿರಾಜನು ಕೆಳಗೆ ಬಿದ್ದಂತೆ ಆ ಮಹಾಗಜವು ಸತ್ತು ಬಿದ್ದಿತು. ಕೃಷ್ಣನು ಆನೆಯಮೇಲೆ ನಿಂತು ಎಲ್ಲರಿಗೂ ದರ್ಶನ ಕೊಟ್ಟನು. ಜನಜಂಗುಳಿಯ ಹರ್ಷೋದ್ಗಾರವು ಗಗನ ಮಂಡಲವನ್ನು ಭೇದಿಸಿತು. ಅಮರರು ಹೂಮಳೆಗರೆದರು.

ಆನೆಯ ದಂತಗಳನ್ನು ಹೆಗಲಲ್ಲಿ ಹೊತ್ತುಕೊಂಡು ಬಲರಾಮ ಕೃಷ್ಣರು ರಂಗದ್ವಾರದ ರಚನೆಯನ್ನು ಮೆಚ್ಚಿಕೊಳ್ಳುತ್ತ ಒಳಹೊಕ್ಕರು. ಕಂಸನ ಆಸ್ಥಾನಮಂಟಪದ ತುಂಬ ಮಲ್ಲರು ನೆರೆದಿದ್ದರು. ಛತ್ರಚಾಮರ, ಬಿಗಿದ ಮೇಲ್ಕಟ್ಟುಗಳ ವೈಭವದಿಂದ ಕೂಡಿ ಕಂಸನು ಸಿಂಹಾಸನದ ಮೇಲೆ ಕುಳಿತಿದ್ದನಾದರೂ ಅವನ ದುಗುಡ ಮುಖದಲ್ಲಿಯೇ ಕಾಣುತ್ತಿತ್ತು. ಮತ್ತ ಗಜವನ್ನು ಕೊಂದದ್ದನ್ನು ಕೇಳಿ, ಅವರ ಆಕೃತಿಯನ್ನು ಕಂಡು, ಕಂಸನ ಹೃದಯವನ್ನು ಭೀತಿ ಹೊಕ್ಕಿತು. ಅವನ ಧೈರ್ಯ ಕರಗಿಹೋಯಿತು. ಇವರು ತನಗೆ ಮೃತ್ಯುಗಳೇ ಸರಿಯೆಂದು ಅವನು ತಿಳಿದುಕೊಂಡನು. ನೆರೆದಿದ್ದ ಜನರು ಬಲಕೃಷ್ಣರ ಬಾಲಲೀಲೆಗಳನ್ನು ವರ್ಣಿಸುತ್ತ ಕೊಂಡಾಡು

ತ್ತಿದ್ದರು. ಆ ಸಮಯಕ್ಕೆ ಮಲ್ಲರ ಗುಂಪು ರಂಗವನ್ನು ಪ್ರವೇಶಿಸಿತು. ಮಲ್ಲವರೆಗಳು ಮೊಳಗಿದುವು.

ಮಲ್ಲರ ಮುಖಂಡನಾದ ಚಾಣೂರನು ಕಳಕ್ಕಿಳಿದು ಕೃಷ್ಣನನ್ನು ಮೂದಲಿಸಿ ಕಾಳಗಕ್ಕೆ ಕರೆಯತೊಡಗಿನು. "ಗೋವಿಂದ, ಬಾ ನೀನು ಬಹಳ ಬಲ್ಲಿದನೆಂದು ಕೇಳಿ ನಮ್ಮರಸನು ನಿನ್ನನ್ನು ಕರೆಸಿದ್ದಾನೆ. ಅಳಿಯಂದಿರಾಟವನ್ನು ನೋಡುವ ಸಂಭ್ರಮ ನಮ್ಮ ರಾಯನಿಗೆ. ನಿನ್ನ ಮಲ್ಲಶ್ರಮವನ್ನು ನನ್ನೊಡನೆ ತೋರುಬಾ" ಎಂದು ಕರೆದ ಚಾಣೂರನನ್ನು ಕುರಿತು ಕೃಷ್ಣನು "ಮಲ್ಲರ ಅರಸನೆ, ನಿಮ್ಮ ಭೂವಲ್ಲಭನು ಮರುಳನು. ವನಗಿರಿವಾಸಿಗಳಾದ ದನಕಾಯುವ ಗೊಲ್ಲರಿಗೆ ಮಲ್ಲವಿದ್ಯೆ ಅದೆಲ್ಲಿಂದ ಬರಬೇಕು? ನಿನ್ನಂಥ ಬಲ್ಲಿದನೊಡನೆ ನನಗೆ ಸಮರ ವಿಹಾರ ಸಮನಲ್ಲ. ನಿನ್ನ ಗುಂಪಿನಲ್ಲಿ ಮಲ್ಲಬಾಲಕರಿದ್ದರೆ ಕರೆಯಿಸು, ಕಾಳಗಮಾಡುತ್ತೇನೆ" ಎಂದು ಉತ್ತರ ಹೇಳಿದನು.

"ಕೃಷ್ಣ, ಇದನ್ನೆಲ್ಲ ಯಾರಿಗೆ ಹೇಳುವೆ? ನೀನು ಗೋಪಕುಮಾರಕನೆ? ತೃಣಾವರ್ತಾದಿ ವೀರರನ್ನು, ಪೂತನಿಯನ್ನು, ಇತರ ರಕ್ಕಸರನ್ನು ಕೊಂದವರಾರು? ಕಂಸನ ಬಿಲ್ಲನ್ನು ಮುರಿದವರಾರು? ಸುಮ್ಮನೆ ಬಿನ್ನಾಣ ಮಾಡಬೇಡ. ಬಾ. ನೀನು ನನ್ನೊಡನೆ ಕಾಳಗಮಾಡು. ಮುಷ್ಟಿಕ ಬಲರಾಮರು ಯುದ್ಧಮಾಡಲಿ. ರಾಜನು ವಿನೋದವನ್ನು ನೋಡಲಿ." ಎಂದು ನುಡಿಯುತ್ತ ಚಾಣೂರನು ಕೃಷ್ಣನನ್ನು ಕೈಹಿಡಿದೆಳೆದನು. ಮಲ್ಲಯುದ್ಧಕ್ಕೆ ಮೊದಲಾಯಿತು. ಚಾಣೂರ ಕೃಷ್ಣರೊಂದೆಡೆಯಲ್ಲಿ, ಮುಷ್ಟಿಕ ಬಲರಾಮರಿನ್ನೊಂದೆಡೆಯಲ್ಲಿ, ರಂಗದಮೇಲೆ ಉಗ್ರವಾಗಿ ಕಾದತೊಡಗಿದರು. ಬಗೆಬಗೆಯ ಬಂಧಗಳಿಂದ ಹಿಡಿಯುವ, ಬಿಡಿಸಿಕೊಳ್ಳುವ ಸಾಹಸವು ನಡೆಯುತ್ತಿತ್ತು. ಆ ಲೋಕೈಕ ವೀರರು ಬಹುವಿಧದ ಮಲ್ಲ ಪಟ್ಟುಗಳನ್ನು ತೋರಿ ತಮ್ಮ ವಿದ್ಯಾವೈಭವವನ್ನು ಮೆರೆದರು.

ಆ ಸಭೆಯಲ್ಲಿ ಸೇರಿದ್ದ ಸ್ತ್ರೀಜನರು ಸುಕುಮಾರರಾದ ಈ ಬಾಲಕರು ವಜ್ರಕಾಯರೂ ಗಿರಿಸನ್ನಿಭರೂ ಆದ ಈ ಜಗಜಟ್ಟಿಗಳೊಡನೆ ಹೋರಾಡುವುದನ್ನು ಕಂಡು ಮರುಗಿದರು; ಸಮಜೋಡಿಯಲ್ಲದ ಈ ಮಲ್ಲರ ಕಾಳಗ ಅನ್ಯಾಯವೆಂದು ಕೊರಗಿದರು. ಅವರ ಮನಸ್ಸಿನ ಕೊರಗನ್ನು ಸರ್ವಾಂತ

ರ್ಯಾಮಿಯಾದ ಕೃಷ್ಣನರಿತನು. ಆ ಸುಜನರನ್ನೊಮ್ಮೆ ಕೃಪಾದೃಷ್ಟಿ ಯಿಂದ ನೋಡಿ ಕೃಷ್ಣನು ಚಾಣೂರನೊಡನೆ ರಭಸದಿಂದ ಕಾಳಗಕ್ಕೆ ತೊಡ ಗಿದನು. ನುಗ್ಗಿಬಂದ ಚಾಣೂರನಿಗೆ ಸಿಕ್ಕದೆ ಕೃಷ್ಣನು ತಪ್ಪಿಸಿಕೊಳ್ಳಲು ಅವನು ರಭಸದಿಂದ ಕೆಳಗೆ ಬಿದ್ದನು. ಕೂಡಲೆ ಕೃಷ್ಣನು ಅವನ ಮೇಲೆ ಬಿದ್ದು ಹೊರಳಿಸಿ ಎದೆಗೆ ಒದೆಯಲು ಆ ಮಲ್ಲನಿಗೆ ಮೂಗುಬಾಯ್ಗಳಲ್ಲಿ ರಕ್ತ ಸುರಿಯಲಾರಂಭವಾಯಿತು. ಕೃಷ್ಣನು ಅಲ್ಲಿಗೆ ಬಿಡದೆ ಚಾಣೂರ ನನ್ನು ಹಿಡಿದೆತ್ತಿ ಮೇಲಕ್ಕೆಸೆಯಲು ಅವನ ತಲೆಯೊಡೆದು ಚೂರಾಯಿತು. ಚಾಣೂರನ ಆಯುರ್ದಾಯ ಮುಗಿಯಿತು. ಗೋಪರು ಆನಂದದಿಂದ ಕೇಕೆಹಾಕಿದರು. ಈ ಹೊತ್ತಿಗೆ ಸರಿಯಾಗಿ ಹಲಾಯುಧನು ಮುಷ್ಟಿಕ ನನ್ನು ವಜ್ರದಂತೆ ಗಟ್ಟಿಯಾದ ತನ್ನ ಮುಷ್ಟಿಯಿಂದಲೇ ಗುದ್ದಿಗುದ್ದಿ ಕೊಂದನು. ಜಗಜಟ್ಟಿಗಳೆಂದು ಹೆಸರಾಂತ ಚಾಣೂರ ಮುಷ್ಟಿಕರಿಬ್ಬರೂ ಗೊಲ್ಲರ ಹುಡುಗರಿಬ್ಬರ ಕೈಲಿ ಹೀಗೆ ಸತ್ತುದನ್ನು ಕಂಡ ಜನ ಆಶ್ಚರ್ಯದಲ್ಲಿ ಮುಳುಗಿದರು. ದೇವತೆಗಳು ಆನಂದದಿಂದ ಜಯಕಾರ ಮಾಡಿ ಹೂಮಳೆ ಗರೆದರು. ಕಂಸನು ದಿಗ್ಭ್ರಾಂತನಾದನು.

ಮಲ್ಲಪಡೆಯ ಮುಖಂಡರಿಬ್ಬರೂ ಸ್ವಲ್ಪದರಲ್ಲಿಯೇ ಹತರಾದು ದನ್ನು ಕಂಡು ಕೌಸಲ, ನುತ್ತು ಕೂಟರೆಂಬ ಇಬ್ಬರು ಜಟ್ಟಿಗಳು ಬಲಕೃಷ್ಣ ರೊಡನೆ ಕಾಳಗಕ್ಕೆ ನಿಂತರು; ನಿಂತುದೇ ತಡ, ಯಮಾಲಯವನ್ನು ಸೇರಿ ದರು. ಬೆಂಕಿಯೊಡನೆ ಹುಲ್ಲಿಗೆ ಸರಸ ಶಕ್ಯವೆ ? ಹೆಸರಾದ ಹಿರಿಯ ಮಲ್ಲ ರೆಲ್ಲ ದೀಪವನ್ನು ಮುತ್ತಿದ ಪತಂಗಗಳಂತೆ ನಾಶವಾದುದನ್ನು ಕಂಡು ಕಂಸನ ಉಳಿದ ಮಲ್ಲರು ಜೀವದಾಸೆಯಿಂದ ದಿಕ್ಕೆಟ್ಟು ಓಡಿದರು. ಬಲ ರಾಮ ಮುರಾಂತಕರು ವಿಜಯಶಾಲಿಗಳಾಗಿ ಮಲ್ಲಕಳದಲ್ಲಿ ನಿಂತು ಸಿಂಹ ನಾದ ಮಾಡಿದರು.

ಕಂಸನಿಗೆ ಇನ್ನು ತಡೆಯಲಾಗಲಿಲ್ಲ. ಅವನು ಕೋಪದಿಂದ ವಾದ್ಯ ಘೋಷವನ್ನು ನಿಲ್ಲಿಸಿ ತನ್ನಸೈನಿಕರನ್ನು ಗದರಿಸಿ “ ಈ ಕುಹಕಿಗಳನ್ನು ಊರಹೊರಕ್ಕೆ ತಳ್ಳಿ ಈ ನಂದ ಪುತ್ರರನ್ನೇಕೆ ಕೊಂಡಾಡುವಿರಿ? ಇಗೋ ನಿಮಗೆ ಇವರ ಗೋಪಲವನ್ನು ಕೈ ಸೂರೆಯಾಗಿ ಬಿಟ್ಟಿದ್ದೇನೆ ಇವರನ್ನೂ ಕೊಲ್ಲಿರಿ. ಸಮಸ್ತ ಯಾದವರನ್ನೂ ಇರಿದು ಕೊಲ್ಲಿ ” ಎಂದು ಅಬ್ಬರಿಸಿ

ದನು. ಆಗ ಕೃಷ್ಣನು ಬಲರಾಮನು ಸುಮ್ಮನೆ ನೋಡುತ್ತಿರಬೇಕೆಂದು ಹೇಳಿ ಕಂಸನು ಕುಳಿತಿದ್ದ ಮಂಚದಮೇಲಕ್ಕೆ ನೆಗೆದು ಅವನ ಜುಟ್ಟು ಹಿಡಿದುಕೊಂಡನು. ಕಂಸನು ಮೊದಲೇ ಭೀತಿಯಿಂದ ಅರ್ಧ ಸತ್ತಂತಾಗಿದ್ದನು. ಕೃಷ್ಣನು ತನ್ನ ಮೇಲೆ ಬೀಳುತ್ತಲೂ ಅವನು ಜೀವದಾಸೆಯನ್ನು ತೊರೆದು ಹೋರಾಡಿದನಾದರೂ ಬಹಳ ಹೊತ್ತು ತಡೆಯಲಿಲ್ಲ. ಕ್ಷಣ ಮಾತ್ರದಲ್ಲಿ ಜಗದೀಶ್ವರನು ಅವನ ತಲೆಯನ್ನು ಮುರಿದೀಡಾಡಿದನು. ಗರುಡನು ಉರಗನನ್ನು ಅವುಕಿ ಹಿಡಿದಂತೆ ಕೃಷ್ಣನು ಕಂಸನನ್ನು ಅದುಮಿ ಹಿಡಿದು ಅವನ ಕರುಳನ್ನು ಕಿತ್ತೆಸೆದನು. ಮಲ್ಲಕಳವೆಲ್ಲ ರಕ್ತಮಯವಾಯಿತು. ಅಣ್ಣನ ದುರ್ಗತಿಯನ್ನು ಕಂಡು ಕಂಸನ ತಮ್ಮಂದಿರೆಂಟುಜನ ಕೃಷ್ಣನ ಮೇಲೆ ಯುದ್ಧಕ್ಕೆ ಸಿದ್ಧರಾದರು. ಆದರೆ ಇದನ್ನೆಲ್ಲ ನೋಡುತ್ತಿದ್ದ ಬಲರಾಮನು ಅವರನ್ನು ಒಟ್ಟಿಗೆ ದೇವಲೋಕಕ್ಕೆ ಅಟ್ಟಿದನು. ಕೃಷ್ಣದ್ವೇಷದಿಂದ ಕಂಸನು ಭ್ರಾತೃಸಮೇತನಾಗಿ ವಿನಾಶ ಹೊಂದಿದನು.

ಕಂಸನ ಕೊಲೆಯವಾರ್ತೆ ತಿಳಿದು ಅವನ ಹೆಂಡಿರು ಗೋಳಾಡುತ್ತ ಅವನ ಕಳೇಬರದ ಬಳಿಗೆ ಬಂದರು. ಅಂತಃಪುರದ ಸ್ತ್ರೀಯರ ರೋದನ ಧ್ವನಿ ಮುಗಿಲುಮುಟ್ಟಿತು. ಅವರ ಕಣ್ಣೀರು ಪ್ರವಾಹವಾಗಿ ಹರಿದು ಮಲ್ಲಕಳದ ನೆತ್ತರ ಮಡುವಿನಲ್ಲಿ ಸಂಗಮವಾಯಿತು. ಕೃಷ್ಣನು ಅವರಿಗೆ ಸಮಾಧಾನ ಹೇಳಿ ಮೃತ ರಾಜಸಂತತಿಗೆಲ್ಲ ಸಾಂಪ್ರದಾಯಕವಾದ ಊರ್ಧ್ವದೈಹಿಕ ಕ್ರಿಯೆಗಳನ್ನು ಮಾಡಿಸಿದನು.

ಕಂಸನನ್ನು ಕೊಂದಾದಮೇಲೆ ಕೃಷ್ಣಬಲರಾಮರು ಆತುರದಲ್ಲಿ ಮಧುರೆಯ ಸೆರೆಮನೆಯನ್ನು ಸೇರಿ ಮಹಾರಾಜ ಉಗ್ರಸೇನನನ್ನೂ, ವಸುದೇವ ದೇವಕಿಯರನ್ನೂ ಸೆರೆಯಿಂದ ಬಿಡಿಸಿ ಅವರ ಸಂಕೋಲೆಗಳನ್ನು ಕಡಿಸಿದನು. ಹಿರಿಯರಿಗೆ ನಮಸ್ಕಾರಮಾಡಿ ಕೃಷ್ಣನು "ಕಡುಪಾಪಿ ಕಂಸನು ನಿಮ್ಮನ್ನು ಬಹುಕಾಲ ಹಿಂಸೆ ಪಡಿಸಿ ಅದರ ಫಲವನ್ನೀಗ ಅನುಭವಿಸಿದನು. ಅವನನ್ನು ಕೊಲ್ಲದೆ ನಿರ್ವಾಹವಿಲ್ಲದಾಯಿತು." ಎಂದು ಹೇಳಿ ಉಗ್ರಸೇನನನ್ನು ಸಿಂಹಾಸನದ ಮೇಲೆ ಕೂಡಿಸಿ ರಾಜ್ಯಾಭಿಷೇಕ ಮಾಡಿಸಿದನು. ತರುವಾಯ, ಕಂಸನ ಕಾಟದಿಂದ ನೊಂದು ಸ್ವದೇಶವನ್ನು ತೊರೆದು ಕಾಂದಿಶೀಕರಾಗಿ ಹೊರಟುಹೋಗಿದ್ದ ಯಾದವರನ್ನೆಲ್ಲ ಕರೆಸಿ ಆದರಿಸಿ ಅವರ ಪೂರ್ವದ

ಮಂದಿರಗಳನ್ನೂ ಧನಕನಕಗಳನ್ನೂ ಗೋವುಗಳನ್ನು ಅವರಿಗೆ ಕೊಡಿಸಿ ಕೃಷ್ಣನು ಧರ್ಮಸಂಸ್ಥಾಪನೆ ಮಾಡಿದನು.

## ಗುರುಕುಲ

ಕಂಸನನ್ನು ಕೊಂದಮೇಲೆ ಅವನ ರಾಜ್ಯಕ್ಕೆ ಆಸೆಪಡದೆ ಕೃಷ್ಣನು ಉಗ್ರಸೇನನಿಗೆ ರಾಜ್ಯವೊಪ್ಪಿಸಿದ್ದನ್ನು ಕಂಡು ಸಮಸ್ತ ಜನರೂ ಅವನ ಧರ್ಮಪ್ರವೃತ್ತಿಯನ್ನು ಮನದಣಿಯೆ ಕೊಂಡಾಡಿದರು. ವಸುದೇವನು ದೇವಕೀ ಸಮೇತನಾಗಿ ಬಿಡುಗಡೆ ಹೊಂದಿ ಕೃಷ್ಣಜನನಕಾಲದಲ್ಲಿ ತಾನು ಸಂಕಲ್ಪಿಸಿದ್ದಂತೆ ವಿಪ್ರರಿಗೆ ಸಹಸ್ರಾರು ಗೋವುಗಳನ್ನು ದಾನಮಾಡಿ ಕೃಷ್ಣ ಬಲರಾಮರಿಗೆ ಕ್ಷತ್ರಿಯೋಚಿತವಾದ ವೈದಿಕ ಸಂಸ್ಕಾರಗಳನ್ನು ನಡೆಸಿ ಉಪನಯನ ಮಾಡಿದನು. ಮಧುರಾನಗರ ಮಹದಾನಂದದಲ್ಲಿ ಓಲಾಡಿತು. ದೇವಕಿಯ ಮದುವೆಯಾದ ಮೇಲೆ ಆ ನಗರ ಇಂಥಾ ಉತ್ಸವವನ್ನು ಕಂಡಿರಲಿಲ್ಲ. ಅಖಿಲ ಯಾದವರು ಸಡಗರದಿಂದ ಉತ್ಸವದಲ್ಲಿ ಭಾಗಿಗಳಾದರು. ಕಂಸನ ಗೋಧನವನ್ನೆಲ್ಲ ತರಿಸಿ ಅವುಗಳ ಕೋಡುಗಳಿಗೆ ಚಿನ್ನದ ಕೊಪ್ಪುಗಳನ್ನೂ ಗೊರಸುಗಳಿಗೆ ಬೆಳ್ಳಿಯ ರೇಕುಗಳನ್ನೂ ತೊಡಿಸಿ ದಿವ್ಯ ವಸ್ತ್ರಗಳನ್ನು ಹೊದಿಸಿ ಅವುಗಳನ್ನು ಬೇಕು ಬೇಕಾದವರಿಗೆ ವಸುದೇವನು ದಾನ ಕೊಟ್ಟನು.

ಬಲರಾಮಕೃಷ್ಣರು ಹೊಸದಾಗಿ ದ್ವಿಜತ್ವವನ್ನು ಗಳಿಸಿ ತೇಜೋಶಾಲಿಗಳಾದರು. ಮೊದಲೇ ಪ್ರಕಾಶಮಾನವಾದ ರವಿರತ್ನಗಳಿಗೆ ಗಂಗಾಸ್ಪರ್ಶವೂ ಲಭಿಸಿದಂತಾಯಿತು—ಅವರಿಗೆ ಉಪನಯನವಾದದ್ದು! ಬಳಿಕ ವಿದ್ಯಾಮೂರ್ತಿಗಳೆನಿಸಿದ ಆ ಸಹೋದರರು ಗುರುಕುಲ ವಾಸವನ್ನು ಬಯಸಿ ಕಾಶೀನಿಲಯನಾದ ಸಾಂದೀಪನಿಯೆಂಬ ಮುನಿಯ ಸನ್ನಿಧಿಯನ್ನು ಸೇರಿ ಆತನಲ್ಲಿ ಅಂತೇವಾಸಿಗಳಾಗಿ ನಿಂತು ವಿವಿಧ ವಿದ್ಯೆಗಳನ್ನು ಕಲಿತರು. ಈ ಶಿಷ್ಯರು ವಿದ್ಯೆ ಕಲಿತ ಕ್ರಮವನ್ನು ಕಂಡು ಇವರು ಸಾಧಾರಣ ಬಾಲಕರಲ್ಲವೆಂಬುದನ್ನು ಸಾಂದೀಪನಿಯು ಮನಗಂಡನು. ಇವರು ಯೋಗಸಿದ್ಧರೋ, ದೇವ ಪುರುಷರೋ ಇರಬೇಕೆಂದೂ ಇವರಿಗೆ ತಾನು ನೆಪಮಾತ್ರಕ್ಕೆ ಗುರುವೆಂದೂ ತಿಳಿದು ಆತನು ಇವರಿಗೆ ಧನುರ್ವೇದವೇ

ಮೊದಲಾದ ಸಮಸ್ತ ವಿದ್ಯೆಗಳನ್ನೂ ಕಲಿಸಿದನು. ನಲವತ್ತುನಾಲ್ಕು ದಿನಗಳಲ್ಲಿ ಸಮಸ್ತ ವಿದ್ಯೆಗಳನ್ನೂ ಕಲಿಯುವಷ್ಟು ಚಿತ್ತಶುದ್ಧಿಯುಳ್ಳ ಶಿಷ್ಯರು ದೊರೆತುದರಿಂದ ತಾನು ಧನ್ಯನೆಂದು ಭಾವಿಸಿ ಸಾಂದೀಪನಿ ಆನಂದಪಟ್ಟನು. ಕೃಷ್ಣ ಬಲರಾಮರು ವಿದ್ಯಾಮಯರಾಗಿ ಸರ್ವಜ್ಞರೆನಿಸಿದರು.

ವಿದ್ಯಾರ್ಜನೆ ಮುಗಿದ ಮೇಲೆ ಕೃಷ್ಣ ಬಲರಾಮರು ಗುರುವಿಗೆ ನಮಸ್ಕಾರ ಮಾಡಿ "ಸ್ವಾಮಿ, ತಾವು ನಮಗೆ ಆತ್ಮ ವಿದ್ಯೆಯನ್ನು ದಾನಮಾಡಿ ಕೃತಾರ್ಥರನ್ನಾಗಿಸಿದಿರಿ. ನಿಮಗೆ ನಾವೇನು ಗುರುದಕ್ಷಿಣೆಯನ್ನು ಸಮರ್ಪಿಸೋಣ? ನಮ್ಮ ಬಲವರಿತು ಆಜ್ಞಾಪಿಸಿ" ಎಂದು ಬಿನ್ನವಿಸಿದರು. ಆ ಗುರುವಿಗೆ ಏನೂ ತೋಚಲಿಲ್ಲ. ಈ ಮಹಾತ್ಮರನ್ನೇನು ಕೇಳಬೇಕೆಂದು ಹೊಳೆಯದೆ ಸಾಂದೀಪನಿಯು ತನ್ನ ಹೆಂಡತಿಯೊಡನೆ ಆಲೋಚನೆ ಮಾಡಿದನು ಆಕೆಯು ಈ ಬಾಲಕರು ಅಸಾಧಾರಣ ತೇಜೋಮೂರ್ತಿಗಳಾಗಿದ್ದುದನ್ನು ಕಂಡು ಇವರು ದೇವ ಪುರುಷರಿರಬೇಕೆಂದೇ ನಂಬಿದ್ದಳು. ಆದ್ದರಿಂದ ಆಕೆಯು ಹಿಂದೆ ಮುಂದೆ ನೋಡದೆ "ಪ್ರಭಾಸ ತೀರ್ಥಕ್ಕೆ ಹೋಗಿ ಅಲ್ಲಿ ನೀರಲ್ಲಿ ಮುಳುಗಿ ಸತ್ತ ನನ್ನ ಮಗನನ್ನು ತಂದುಕೊಡಲಿ" ಎಂದು ಹೇಳಿಬಿಟ್ಟಳು. ಸಾಂದೀಪನಿಯು ತನ್ನ ಶಿಷ್ಯರನ್ನು ಕುರಿತು "ಉತ್ತಮರಿರಾ, ನೀವು ಗುರುಕೃತ್ಯವನ್ನು ಮಾಡುವುದಾದರೆ ಪ್ರಭಾಸದಲ್ಲಿ ಅಳಿದು ಹೋದ ನನ್ನ ಮಗನನ್ನು ತಂದುಕೊಡಿ" ಎಂದು ನುಡಿದನು

"ಹನಾದ. ತಮ್ಮ ಕೃಪೆಗೆ ಪಾತ್ರರಾದ ನಮಗೆ ಅದು ಅಸಾಧ್ಯವಾಗಲಾರದು. ಹೋಗಿ ಬರುವೆವು" ಎಂದು ಹೇಳಿ ಹರಿ ಬಲರಾಮರು ರಥಾರೂಢರಾಗಿ ಹೊರಟು ಪ್ರಭಾಸವನ್ನು ಸೇರಿದರು. ಅಲ್ಲಿ ರಥವಿಳಿದು ಉದಧಿ ತೀರದಲ್ಲಿ ಇವರು ಕುಳಿತ ಕೂಡಲೆ ಸಾಗರ ರಾಜನು ರತ್ನ ನಿಕರವನ್ನು ಕೈಗಾಣಿಕೆಯಾಗಿ ತಂದುಕೊಟ್ಟು ಕಾಲ್ಗೆರಗಿ ವಿನಯದಿಂದ ಕೃಷ್ಣನೊಡನಿಂತೆಂದನು "ಸ್ವಾಮಿಯು ಇತ್ತ ಬಿಜಯ ಮಾಡಿದ ನಿಮಿತ್ತವೇನು? ನನ್ನಿಂದಾಗಬೇಕಾದ ಕೃತ್ಯವಾವುದು?"

ಸಾಗರನ ಈ ವಿನಯೋಕ್ತಿಗಳಿಗೆ ಸಂತುಷ್ಟನಾದ ಕೃಷ್ಣನು "ನೀನು ನನಗಿಂದು ಸೇವೆ ಮಾಡುವ ಇಷ್ಟವುಳ್ಳವನಾದರೆ ನನ್ನ ಗುರುಪುತ್ರನನ್ನು ತಂದುಕೊಡು. ಇಂದು ನಾವು ಬಂದ ಉದ್ದೇಶವಿಷ್ಟೇ." ಎಂದು ಅಪ್ಪಣೆ ಮಾಡಿದನು.

"ಸ್ವಾಮಿ, ಸತ್ತವರನ್ನು ಮತ್ತೆ ತಂದುಕೊಡಲು ನನ್ನಿಂದಾದೀತೇ ? ಸಾವು ಬದುಕುಗಳ ಸ್ವರೂಪವನ್ನು ತಾವು ಅರಿಯಿರೇ ?"

"ಜೀವರು ಪ್ರಾರಬ್ಧ ಕರ್ಮ ವಶದಿಂದ ನರಕಕ್ಕೆ ಸೇರುವರೆಂಬು ದನ್ನು ನಾನು ಬಲ್ಲೆ. ನಾನಲ್ಲದೆ ಆ ಪ್ರಾರಬ್ಧವನ್ನು ತಪ್ಪಿಸಬಲ್ಲವರು ಬೇರೆ ಯಾರೂ ಇಲ್ಲ. ಮೂಜಗದ ಒಡೆಯರಾರು ? ಅರಿಯೆಯಾ ? ನಾ ಹೇಳಿದರೆ ಕರೆತರಬಹುದು. ಹೋಗು, ಗುರುಪುತ್ರನನ್ನು ಕರೆ ತಾ. ನಾನೊಲಿದ ಮೇಲೆ ಪ್ರಾರಬ್ಧಕರ್ಮ ಬಂಧನವಿಲ್ಲ"

ಕೃಷ್ಣನ ಅಪ್ಪಣೆಯನ್ನು ಶಿರಸಾವಹಿಸಿ ಸಾಗರನು ಹೋಗಿ ಸಾಂದೀಪನಿಯ ಮಗನನ್ನು ತಂದು ಕೊಟ್ಟನು. ಬಲರಾಮ ಕೃಷ್ಣರು ಅವನನ್ನು ಬೀಳ್ಕೊಂಡು ಗುರುಪುತ್ರರೊಡನೆ ಸಾಂದೀಪನಿಯ ಸನ್ನಿಧಿಯನ್ನು ಸೇರಿದರು. ಗೋವಿಂದ ರಾಮರು ಗುರುದಕ್ಷಿಣೆಗಾಗಿ ತಮ್ಮ ಮಗನನ್ನು ಬದುಕಿಸಿ ತಂದು ಕೊಟ್ಟುದನ್ನು ಕಂಡು ಸಾಂದೀಪನಿಯ ಹರ್ಷಕ್ಕೆ ಎಲ್ಲೆಯಿಲ್ಲದಂತಾ ಯಿತು. ಕಾಲಿಗೆರಗಿದ ರಾಮಕೃಷ್ಣರನ್ನು ಬಾಚಿ ತಬ್ಬಿಕೊಂಡು ಸಾಂದೀ ಪನಿಯು ಆನಂದ ಬಾಷ್ಪಗಳನ್ನು ಕರೆಯುತ್ತ "ಮಕ್ಕಳಿರಾ, ವೃದ್ಧಿಶೀಲ ರಾಗಿ, ಪವಿತ್ರ ಕೀರ್ತಿಗಳಾಗಿ" ಎಂದು ಬಾಯಿತುಂಬ ಹರಸಿದನು.

ಗುರು, ಗುರುಪತ್ನಿಯರ ಆಶೀರ್ವಾದಗಳನ್ನು ಪಡೆದು ಸಹಜ ಪ್ರಕಟ ವಿದ್ಯರಾದ ಗೋವಿಂದರಾಮರು ಸಡಗರದಿಂದ ಮಥುರಾಪುರಕ್ಕೆ ಹೊರಟು ಬಂದರು. ಸಮಸ್ತ ಪರಿಜನ ಪುರಜನ ಬಂಧು ಜನರು ಬಲಕೃಷ್ಣರನ್ನು ಒಲಿದು ಇದಿರುಗೊಂಡರು.

## ಮಥುರೆಯ ಮುತ್ತಿಗೆ

ಕಂಸಹನನವಾದ ಮೇಲೆ ಅವನ ಹೆಂಡಿರಾದ ಅಸ್ತಿಪ್ರಾಸ್ತಿಯರಿ ಬ್ಬರು ತಮ್ಮ ತಂದೆಯಾದ ಮಗಧೇಂದ್ರನಲ್ಲಿಗೆ ಹೋಗಿ ಗೋಳಿಟ್ಟು ತಮ್ಮ ವೈಧವ್ಯ ವೇದನೆಯನ್ನು ಹೇಳಿಕೊಂಡರು. ಮಲಿನ ವಸ್ತುವನ್ನು ಧರಿಸಿ ಓಲೆವಾಗ್ಯವನ್ನು ಕಳೆದುಕೊಂಡು ಮುಡಿಗೆದರಿ ಕಂಬನಿಯ ಹೊನಲಿನಲ್ಲಿ ಮುಳುಗಿದ ತನ್ನ ಮಕ್ಕಳನ್ನು ಕಂಡು ಮಾಗಧನಿಗೆ ಹೊಟ್ಟೆಯಲ್ಲಿ ಬೆಂಕಿ ಬಿತ್ತು. ಗೋಪರ ಮಕ್ಕಳಿಬ್ಬರು ಬಂದು ತನ್ನ ಅಳಿಯನನ್ನು ಕೊಂದರೆಂದು

ಕೇಳಿ ಅವನ ರೋಷಾಗ್ನಿ ಭುಗಿಲೆಂದಿತು. ಆವನು ಕಾಲಾಂತಕನಂತೆ ಕೆರಳಿ ಯಾದವರನ್ನು ಕೊಂದು ಸೇಡು ತೀರಿಸಿಕೊಳ್ಳುವೆನೆಂದು ಶಪಥಮಾಡಿ ಇಪ್ಪತ್ತುಮೂರು ಅಕ್ಷೋಹಿಣೀ ಸೈನ್ಯದೊಡನೆ ಮಧುರಾ ಪಟ್ಟಣಕ್ಕೆ ಹೊರಟನು.

ಸಮುದ್ರವು ಮೇರೆಯನ್ನು ಮೀರಿ ಭೂಮಿಯನ್ನು ನುಂಗಲು ಬರುವಂತೆ ಜರಾಸಂಧನ ಸೈನ್ಯವು ಮಧುರೆಯ ಕಡೆಗೆ ಕವಿದು ಬಂತು. ಸೈನ್ಯದ ಪದಹತಿಗೆ ಕೆಂದೂಳು ಗಗನವನ್ನು ಮುತ್ತಿತು. ಸೈನಿಕರ ಕೋಲಾಹಲಕ್ಕೆ ಸೂರ್ಯಾಶ್ವಗಳು ಅಂಜಿ ನಡೆಗೆಟ್ಟವು; ಎಲ್ಲೆಲ್ಲಿಯೂ ಮಾಗಧನ ಸೈನ್ಯವೇ ಕಾಣುತ್ತಿತ್ತು. ಮಧುರೆಯನ್ನು ನಾನಾ ದಿಕ್ಕುಗಳಲ್ಲಿಯೂ ಜರಾಸಂಧನ ಸೈನ್ಯ ಮುತ್ತಿತು. ಮಾಗಧನ ಬರುವಿಕೆಯನ್ನು ಕೇಳಿ ತಿಳಿದ ಶರಣಜನ ಸಂಸಾರಿಯಾದ ಕೃಷ್ಣನು ಭೂಭಾರವನ್ನು ತಗ್ಗಿಸಲು ಇದು ತಕ್ಕ ಸಮಯವೆಂದು ಬಗೆದು ಜರಾಸಂಧನ ನೆಪದಿಂದ ದುಷ್ಟ ಕ್ಷತ್ರಿಯರ ಸಂಹಾರಮಾಡ ಬಯಸಿ ಯಾದವ ವೀರರನ್ನೆಲ್ಲ ಬರಮಾಡಿ ಮುಂದಿನ ಕಾರ್ಯಕ್ರಮವನ್ನು ವಿವರಿಸಿದನು. ಬಲರಾಮನೂ ಕೃಷ್ಣನ ಜತೆಯಲ್ಲಿ ಯುದ್ಧಕ್ಕೆ ಸಿದ್ಧನಾದನು. ಮಧುರೆಯ ನಾಲ್ಕು ದಿಕ್ಕಿನ ಹೆಬ್ಬಾಗಿಲುಗಳಲ್ಲಿಯೂ ಹಲವು ಯಾದವ ವೀರರನ್ನು ಕಾವಲಿರಿಸಿ ಬಲರಾಮನೊಡನೆ ಕೃಷ್ಣನು ಪರಚಕ್ರವನ್ನು ಭೇದಿಸಲು ಹೊರಟನು. ಹರಿಬಲರ ರಥದ ಎರಡು ಕಡೆಗಳಲ್ಲಿಯೂ ಮಾಗಧ ಸೈನ್ಯ ಹೆದರಿ ದಾರಿಬಿಟ್ಟಿತು. ಮಾಗಧನು ದೂರದಿಂದ ಇದನ್ನು ಕಂಡು ತನ್ನ ಸೈನ್ಯದೊಳಕ್ಕೆ ಬಂದು ರಾಮಕೃಷ್ಣರು ಸಿಕ್ಕಿಬಿದ್ದರೆಂದು ಬಗೆದು ತನ್ನವರಿಗೆ ಕೈಬೀಸಿ ಸನ್ನೆಮಾಡಿದನು. ಆಗ ಮಾಗಧನ ಸಾಮಂತರಾಜರು, ಇತರ ವೀರಶ್ರೇಷ್ಠರು ಜೀವದ ಹಂಗು ದೊರೆದು ಕಾದುತ್ತ ಕೃಷ್ಣ ಬಲರಾಮರ ರಥವನ್ನು ಮುತ್ತಿದರು. ಬಾಣಗಳು ಹೊದಿಕೆ ಹೊದಿಸಿದಂತೆ ಅವರ ರಥವನ್ನು ಮುಚ್ಚಿಕೊಂಡುವು

ಆರೆನಿಮಿಷದಲ್ಲಿ ಹರಿಬಲರು ಪರಬಲವಾರ್ಧಿಯನ್ನು ಭೇದಿಸಿಕೊಂಡು ಈಚೆಗೆ ಬಂದರು. ಜರಾಸಂಧನ ಸೈನ್ಯವು ಚೆಲ್ಲಾಪಿಲ್ಲಿಯಾಗಿ ಓಡಿಹೋಯಿತು. ಯಾದವ ಸೈನ್ಯವು ಆನಂದದಿಂದ ಕೋಲಾಹಲ ಮಾಡಿತು. ಕೃಷ್ಣಬಲರಾಮರು ವಿಜಯ ಸೂಚಕವಾದ ಶಂಖಧ್ವನಿ ಮಾಡಿ ಮಧುರೆಯ

ಪುರಜನಕ್ಕೆ ಹರ್ಷೋತ್ಕರ್ಷವನ್ನುಂಟುಮಾಡಿದರು. ಗೋವಿಂದರಾಮರ ಶಸ್ತ್ರಕುಶಲತೆಯನ್ನು ಕಂಡು ಭೀತಿಗೊಂಡು ಶಿಶುಪಾಲಾದಿ ಮಹಾರಾಜರುಗಳೆಲ್ಲ ಜೀವಾಭಿಲಾಷಿಗಳಾಗಿ ರಣರಂಗಕ್ಕಿಳಿಯದೆ ಪಲಾಯನ ಮಾಡಿದರು. “ಇದು ಮಾಗಧನಿಟ್ಟ ಕಿಚ್ಚು. ನಮಗೇಕೆ ಈ ರಗಳೆ ?” ಎಂದು ಹೇಳಿಕೊಳ್ಳುತ್ತ ಉಳಿದ ಮನ್ನೆಯರು ರಣರಂಗವನ್ನು ತ್ಯಜಿಸಿದರು. ಜಗಜಟ್ಟಿ ರಾಮನ ಮುಸಲಹತಿಗೆ ಮಾಗಧ ಸೈನ್ಯದಿಂದ ಒಂದು ರಕ್ತದ ಪ್ರವಾಹವೇ ಹರಿಯಿತು. ಮಾಗಧನ ಗಜಘಟೆಗಳು ಕೃಷ್ಣನ ಬಾಣಘಾತಕ್ಕೆ ಸಿಕ್ಕಿ ತರಗೆಲೆಗಳಂತೆ ನೆಲಕ್ಕುರುಳಿದುವು.

ಓಡಿಹೋಗುತ್ತಿದ್ದ ರಾಜರನ್ನು ಕಂಡು ಜರಾಸಂಧನು ಮಹಾತಿರಸ್ಕಾರದಿಂದ ನಕ್ಕು ಸ್ವಂತವಾಗಿ ರಣಭೂಮಿಗಿಳಿದು ಬಲರಾಮನೊಡನೆ ಯುದ್ಧಕ್ಕೆ ತೊಡಗಿದನು. ದಿಕ್ಕರಿಗಳೆರಡು ಹೋರಾಡುವಂತೆ ಜರಾಸಂಧ ಬಲರಾಮರು ಕಾಳಗಕ್ಕೆ ತೊಡಗಿದರು. “ನನ್ನ ಸೈನ್ಯವನ್ನು ನಾಶಪಡಿಸಿದ ಗರ್ವಗಿರಿಗೆ ಇದು ವಜ್ರಾಯುಧ.” ಎಂದು ಹೇಳುತ್ತ ತನ್ನ ಗದೆಯನ್ನು ಬಲರಾಮನ ಮೇಲೆ ಬೀಸಿದನು. ಬಲರಾಮನು ಉಪಾಯದಿಂದ ಗದೆಯನ್ನು ತಪ್ಪಿಸಿಕೊಂಡು ಜರಾಸಂಧನ ರಣಾರಂಭವನು ನಿಷ್ಫಲವಾಗಿಸಿದನು. ಜರಾಸಂಧನು ಸ್ವಲ್ಪಕ್ಕೆ ಸೋಲುವವನಲ್ಲ. ಆವನು ಬಲರಾಮನನ್ನು ಮೂದಲಿಸಿ “ಇನ್ನೊಮ್ಮೆ ಕೈದುಗೊಳ್ಳು” ಎಂದನು. “ನಾನು ಕೈದುವನ್ನು ಹಿಡಿದರೆ ನಿನ್ನ ಹೆಂಡಿರ ಐದೆತನಕ್ಕವಸಾನ” ಎಂದು ನುಡಿದು ಬಲರಾಮನು ಒನಕೆಯಿಂದ ಹೊಡೆದು ಅವನ ರಥದ ಸಾರಥಿ ಮತ್ತು ಕುದುರೆಗಳನ್ನು ಅಂತಕನಪುರಕ್ಕೆ ಕಳುಹಿಸಿದನು. ರಥವು ನುಗ್ಗುನೂರಾಯಿತು. ಹೀಗೆ ಬಲರಾಮನು ನಿಮಿಷ ಮಾತ್ರದಲ್ಲಿ ಶತ್ರುವನ್ನು ವಿರಥನನ್ನಾಗಿಸಿ “ಹೋಗು, ನಿನ್ನ ಜೀವವನ್ನುಳಿಸಿದ್ದೇನೆ” ಎಂದು ಗರ್ಜಿಸಲು ಜರಾಸಂಧನು ದುರ್ಧರವಾದ ಲಜ್ಜೆಯಿಂದ ತನ್ನ ನಗರಕ್ಕೆ ಮರಳಿದನು.

ರಾಮಕೃಷ್ಣರು ರಣಭೂಮಿಯಲ್ಲಿ ಸಂಚರಿಸಿ ಹಲವು ರಾಜರ ಆಭರಣಾದಿಗಳನ್ನು ಸಂಗ್ರಹಿಸಿ ಮಧುರಾಪುರಕ್ಕೆ ಸಂತೋಷದಿಂದ ಹಿಂತಿರುಗಿದರು. ಪುರಜನರು ಅವರನ್ನು ರಾಜಮರ್ಯಾದೆಗಳಿಂದ ಇದಿರುಗೊಂಡರು. ನಗರದ ಮಹಾದ್ವಾರದ ಬಳಿ ಪುರಂಧ್ರಿಯರು ಆರತಿಯೆತ್ತಿದರು. ಬೀದಿಗಳುದ್ದಕ್ಕೂ

ಜನ ಕಿಕ್ಕಿರಿದು ನಿಂತಿದ್ದು ಕೃಷ್ಣ ದರ್ಶನಮಾಡಿ ಕೃತಾರ್ಥರಾದರು. ಸ್ತ್ರೀಯರು ಮನೆಮನೆಯ ಉಪ್ಪರಿಗೆಗಳಮೇಲೂ ನಿಂತಿದ್ದು ಕೃಷ್ಣನ ರೂಪಾತಿಶಯವನ್ನು ಕಣ್ದಣಿಯೆ ನೋಡಿದರು.

ಜರಾಸಂಧನು ಸೋತು ಹೊರಟವನು ತನ್ನ ಪುರವನ್ನುಸೇರಿ ತನಗಾದ ಪರಿಭವವನ್ನೇ ಕುರಿತು ಯೋಚಿಸುತ್ತ ಸಂಕಟಪಡುತ್ತಿದ್ದನು. ಗೋಪಾಲಕರಿಗೆ ಸಿಕ್ಕಿ ಸೋತ ಅವಮಾನವನ್ನು ಅವನು ಸಹಿಸಲಾರದೆ ಹೋದನು. ಮತ್ತೆ ಯುದ್ಧಸಿದ್ಧತೆ ಮಾಡಿಕೊಂಡು ದೊಡ್ಡ ಸೈನ್ಯವನ್ನು ಒಟ್ಟುಗೂಡಿಸಿ ಮೂರನೆಯ ತಿಂಗಳಲ್ಲಿ ಮಧುರೆಯ ಮೇಲೆ ದಂಡಯಾತ್ರೆ ಹೊರಟನು. ವಾರಿಧಿಗೆ ಅನೇಕ ನದಿಗಳು ಬಂದು ಸೇರುವಹಾಗೆ ಕಾಶಿ, ಮಾದ್ರ ಚೈದ್ಯ, ಗುಜ್ಜರ, ಪಾರ್ವತೀಯರೇ ಮೊದಲಾದ ಹಲವಾರು ರಾಜರು ತಮ್ಮ ಸೈನ್ಯಗಳೊಡನೆ ಬಂದು ಮಾಗಧನನ್ನು ಕೂಡಿದರು. ಮಧುರೆಯಬಳಿ ಬೀಡುಬಿಟ್ಟ ಮಹಾ ಸೈನ್ಯಸಾಗರವನ್ನು ನೋಡಿ ನಾಳೆ ಯಾದವಕುಲಕ್ಕೆ ಕಡೆಗಾಲವೆಂದೇ ಮಾಗಧನು ನಂಬಿದನು.

ಮಧುರೆಯ ಗೂಢಚಾರರು ಗೋವಿಂದನಲ್ಲಿಗೆ ಬಂದು ಜರಾಸಂಧನ ಆಗಮನವನ್ನು ನಿವೇದಿಸಿದರು. ‘‘ಜೀಯಾ ಅವಧರಿಸಬೇಕು. ಕಾಳಿಂದಿಯ ಬಳಿಗೆ ಕಲ್ಪಾಂತ ಸಾಗರೋಪಮವಾದ ಸೈನ್ಯ ಬಂದು ಸೇರಿದೆ. ಮಾಗಧನು ಬಲಗೂಡಿಸಿಕೊಂಡು ಮಧುರೆಯನ್ನು ಮುತ್ತುವುದಕ್ಕೆ ಮತ್ತೆ ಬಂದಿದ್ದಾನೆ.’

ನಡುವಿರುಳಿನಲ್ಲಿ ಬಂದು ಏಕಾಂತದಲ್ಲಿ ತಮ್ಮನ್ನು ಕಂಡು ಈ ಮಹತ್ವದ ಸುದ್ದಿಯನ್ನು ಹೇಳಿದ ಗೂಢಚಾರನನ್ನು ಮೆಚ್ಚಿ ಗೋವಿಂದರಾಮರು ಅವರಿಂದ ಮಾಗಧನ ಸೈನ್ಯದ ಬಲಾಬಲಗಳನ್ನು ತಿಳಿದುಕೊಂಡು ಕೂಡಲೆ ಕಾರ್ಯತತ್ಪರರಾದರು ; ಯದುವೀರರನ್ನು ಬರಮಾಡಿ ಅವರೊಡನೆ ಮಂತ್ರಾವಲೋಚನೆಮಾಡಿದರು. ಜರಾಸಂಧನು ಮಧುರಾನಗರಿಯ ಬಳಿಗೆ ಬರಲು ಅವಕಾಶ ಕೊಡಕೂಡದೆಂದೂ ಅವನಿರುವ ಬಳಿಗೇ ಹೋಗಿ ಶತ್ರುವಿದಾರಣಮಾಡಬೇಕೆಂದು ನಿರ್ಣಯಿಸಿ ಅಸುರಾರಿಯು ಬಲರಾಮ ಸಮೇತನಾಗಿ ಯುದ್ಧಕ್ಕೆ ಹೊರಟರು.

ನೇಸರು ಮೂಡುವ ವೇಳೆಗೆ ಗದ, ಸಾರಣ, ಸಾತ್ಯಕಿ, ಪೃಥು,

ವಿಪೃಥು, ಉದ್ಧವ ಮೊದಲಾದ ಯಾದವ ವೀರರೊಡನೆ ಶತ್ರುವಿನ ಪಾಳಯದ ಮೇಲೆದಾಳಿಯಿಟ್ಟರು. ನೆಲಬಿರಿಯುವಂತೆ ನಿಸ್ಸಾಳಗಳು ಮೊಳಗಿದುವು. ಶಂಖಧ್ವನಿ ಶತ್ರುಗಳನ್ನು ಕಳವಳಕ್ಕೀಡುಮಾಡಿತು. ಈ ಲಗ್ಗೆಯ ಕೋಲಾಹಲದಿಂದ ಮಾಗಧನ ಕಟಕದಲ್ಲಿನ ಆನೆಗಳು ಗಾಬರಿಗೊಂಡು ಸ್ವಸೈನ್ಯದ ಮೇಲೆಯೇ ನುಗ್ಗಿದುವು. ಆನೆಯ ತುಳಿತಕ್ಕೆ ಸಿಕ್ಕಿ ಸತ್ತವರೆಷ್ಟೋಮಂದಿ. ಬೆಟ್ಟಗಳಂಥ ಆನೆಗಳು ಕೃಷ್ಣನ ಶಂಖಧ್ವನಿಗೆ ರೋಷಗೊಂಡು ನುಗ್ಗುತ್ತಿರಲು ಮಾಗಧನ ಸೈನ್ಯದ ಹಲವು ರಥಗಳು ಭಗ್ನವಾಗಿಹೋದುವು. ಅನಿರೀಕ್ಷಿತವಾದ ಈ ದಾಳಿಯಿಂದ ಸೈನ್ಯ ಕಂಗೆಟ್ಟಿತು. ರಣವೀರರು ಆತುರದಿಂದ ಕವಚಸೀಸಕಗಳನ್ನು ತೊಟ್ಟು ನುಗ್ಗಿದರು. ಬಿಟ್ಟಮುಂಡೆಯಲ್ಲಿ ಜಗಜಟ್ಟಿಗಳನೇಕರು ಕಾಳಗಕ್ಕೆ ನುಗ್ಗಿ ನೆಲಕ್ಕೆ ಬಿದ್ದರು. ಯಾದವವೀರರು ಮಾಗಧ ಸೈನ್ಯವನ್ನು ಹಲವು ದಿಕ್ಕುಗಳಲ್ಲಿ ಹೊಕ್ಕು ರೈತರು ಹೊಲದ ಪೈರನ್ನು ಕುಯ್ಯುವಂತೆ ಕುಯಿದು ಹಾಕುತ್ತಿದ್ದರು. ಅನೇಕರು ದಿಕ್ಕೆಟ್ಟು ಓಡಿದರು. ಮತ್ತೆ ಹಲವರು ಯಾದವರಿಗೆ ಶರಣಾಗತರಾದರು. ಮಾಗಧ ಸೈನ್ಯವು ಹೀಗೆ ಭಂಗಪಟ್ಟುದನ್ನು ಕಂಡು ಕೃಷ್ಣನು " ನಿಶ್ಶಸ್ತ್ರರನ್ನು ಹೊಡೆಯಬೇಡಿ. ವಿರಥರನ್ನು ಕೊಲ್ಲಬೇಡಿ. ಅಂಜಿದವರನ್ನು ರಕ್ಷಿಸಿ. " ಎಂದು ತನ್ನವರಿಗೆ ಅಪ್ಪಣೆಮಾಡಿದನು.

ಈ ರಣಪ್ರಯತ್ನವೂ ಭಂಗವಾದುದನ್ನು ಕಂಡು ಜರಾಸಂಧನು ಬಹಳ ಖೇದಪಟ್ಟು ಸ್ವದೇಶವನ್ನು ಹೊಗಲು ಮನಸ್ಸಿಲ್ಲದೆ ಅಸುರೇಶ್ವರನಾದ ಬಾಣಾಸುರನ ರಾಜಧಾನಿಯಾದ ಶೋಣಿತಪುರಕ್ಕೆ ಹೊರಟನು. ಯುದ್ಧದಲ್ಲಿ ಅಳಿದುಳಿದ ಅಲ್ಪಸ್ವಲ್ಪ ಸೈನ್ಯ ಅವನ ಜತೆಯಲ್ಲಿ ಹೊರಟಿತು. ಜರಾಸಂಧನು ಬಂದದ್ದು ತಿಳಿದು ಬಾಣಾಸುರನು ಇದಿರುಗೊಂಡು ಉಪಚರಿಸಿ ಸಿಂಹಾಸನವನ್ನಿತ್ತು ಕುಳ್ಳಿರಿಸಿ ಅವನ ಆಗಮನದ ಉದ್ದೇಶವೇನೆಂದು ವಿಚಾರಿಸಿದನು. ಅಭಿಮಾನಭಂಗದಿಂದ ಕುದಿಯುತ್ತಿದ್ದ ಜರಾಸಂಧನು ಬಾಣಾಸುರನ ನೆರವನ್ನು ಪಡೆಯುವ ನಲುವಾಗಿ ಅವನಿಗೆ ತನ್ನ ದುಃಖವನ್ನು ವಿವರಿಸತೊಡಗಿದನು. " ದೈತ್ಯಾಧಿಪತಿಯೇ, ಕೇಳು ! ಗೋವಿಂದನೆಂಬ ಗೋಪಸುತನು ನನ್ನ ಸಮಸ್ತ ಸೈನ್ಯವನ್ನೂ ಕೊಂದುದಲ್ಲದೆ ಸಕಲ ರಾಜರನ್ನೂ ಅಪಮಾನ ಪಡಿಸಿ ಅವರ ಸರ್ವಸ್ವವನ್ನೂ ಅಪಹರಿಸಿದನು.

ನನ್ನ ಕೋಶವಾಹನಾದಿಗಳೂ ಅಪಹೃತವಾದವು. ನನ್ನ ಗಜ ಘಟೆ ಹಾಳಾಯಿತು. ನಾನು ನನ್ನ ನಷ್ಟಕ್ಕೆ ಚಿಂತಿಸುವುದಿಲ್ಲ. ನನಗೆ ನೆರವಾಗಿ ಬಂದ ಈ ನೃಪರು ನನ್ನಿಂದ ಕೆಟ್ಟರೆಂಬ ವ್ಯಥೆ ನನಗೆ ದುರ್ಭರವಾಗಿದೆ. ಮಾನನೀಯರಾದ ದೈತ್ಯರಾಜರು ಭಂಗಪಟ್ಟರು. ದೈತ್ಯ ಕುಲಕ್ಕೇ ಅಪಮಾನವಾಗಿದೆ. ಇನ್ನು ನಾವು ಬದುಕಿ ಫಲವೇನು?" ಹೀಗೆ ನುಡಿಯುತ್ತಾ ಜರಾಸಂಧನು ಶೋಕ ಸಂತಪ್ತ ಹೃದಯನಾಗಿ ಕಣ್ಣೀರಿಟ್ಟನು.

ಬಾಣಾಸುರನು ದೈತ್ಯ ಕುಲಕ್ಕಾದ ಹಾನಿಯ ಕಥೆಯನ್ನು ಕೇಳಿ ಮರುಗಿದನು. ಜರಾಸಂಧನಿಗೆ ಸರ್ವ ವಿಧಗಳಲ್ಲಿಯೂ ಸಹಾಯವನ್ನು ಮಾಡುವುದಾಗಿ ಅವನು ಭಾಷೆಕೊಟ್ಟು ಅವನನ್ನು ಸಂತೈಸಿ ಬಂದ ರಾಜರೆನ್ನಲ್ಲ ಆದರಿಸಿ ಉಪಚರಿಸಿದನು. ತರುವಾಯ ಬಾಣಾಸುರನು ತನ್ನ ಮಂತ್ರಿಗಳೊಡನೆ ಆಲೋಚಿಸಿ ಯುದ್ಧ ವಿಶಾರದರಾದ ಮುನ್ನೂರು ಮಂದಿ ರಕ್ಕಸರನ್ನು ಜರಾಸಂಧನ ಸೈನ್ಯವನ್ನು ತರಬೇತು ಮಾಡಲು ಕೊಟ್ಟು ಆರುವತ್ತು ಸಾವಿರ ಗಜಗಳನ್ನೂ ಬಂದು ಲಕ್ಷ ರಥಗಳನ್ನೂ, ಹತ್ತು ಲಕ್ಷ ಜಾತ್ಯಶ್ವಗಳನ್ನೂ ಬೇಕು ಬೇಕಾದ ಶಸ್ತ್ರ ಸಮೂಹವನ್ನೂ ಕೊಟ್ಟನು. ಇದಲ್ಲದೆ ತಳತಂತ್ರ ರಕ್ಷೆಗಾಗಿ ಬಾಣಾಸುರನು ಸಮರ್ಥರಾದ ಇಬ್ಬರು ಮಂತ್ರಿಗಳನ್ನು ಜರಾಸಂಧನ ಜತೆಯಲ್ಲಿ ಕಳುಹಿಸಿದನು. ಹೀಗೆ ಸಮಸ್ತ ಸಮರಸಾಧನಗಳನ್ನೂ ಹೊಂದಿಸಿಕೊಂಡು ಜರಾಸಂಧನು ದೈತ್ಯ ಚಕ್ರೇಶ್ವರನನ್ನು ಬೀಳ್ಕೊಂಡು ಯಮ ಸದೃಶನಾಗಿ ಮಧುರೆಗೆ ದಂಡಯಾತ್ರೆ ಬೆಳೆಸಿದನು.

ಮತ್ತೆ ಮಾಗಧನು ಬಂದುದನ್ನು ಕೇಳಿ ಭೂಭಾರವನ್ನಿಳಿಸಲು ಅವತರಿಸಿದ್ದ ಶ್ರೀ ಕೃಷ್ಣನು ಮತ್ತೆ ಯಾದವ ಭಟರನ್ನು ಕರೆಸಿ ಸನ್ನಾಹ ಭೇರಿ ಹೊಡೆಯಿಸಿದನು. ಅಸುರರಿಪು ಸಂಕರ್ಷಣರು ರಥಾರೂಢರಾಗಿ ಶತ್ರು ಸೈನ್ಯವನ್ನಿದಿರಿಸಿ ಶಂಖವನ್ನೂದಿ ಕಾಳಗವನ್ನು ಆರಂಭಿಸಿದರು. '' ಗೋಪಾಭರ್ಕರು ಬಂದರು '' ಎಂದು ದೈತ್ಯರು ಚೀರಿದರು. ಚಂದ್ರಮಂಡಲವನ್ನು ಕಾರ್ಮುಗಿಲು ಕವಿದಂತೆ ದೈತ್ಯರು ಕೃಷ್ಣನ ಮೇಲೆ ಶರವೃಷ್ಟಿಯನ್ನು ಕರೆದರು. ವಿಶ್ವಂಭರನು ಅರೆನಿಮಿಷ ಬಾಣದ ಮುಸುಕಿನಲ್ಲಿ ಮರೆಯಾದನು. ಉತ್ತರಕ್ಷಣದಲ್ಲಿಯೇ ಹರಿಶರಪರಂಪರೆ ದೈತ್ಯರ ಶರಗಳನ್ನು ಕತ್ತರಿಸಿ

ಮಾಗಧ ಪರಿವಾರವನ್ನೆಲ್ಲ ವ್ಯಾಪಿಸಿತು. ರಣಾಂಗಣದಲ್ಲಿ ಹೆಣಗಳ ರಾಶಿ ಬಿದ್ದಿತು. ಕುಲಿಶಹತಗಿರಿ ಸಮೂಹದಂತೆ ಬಾಣಾಸುರನು ಕೊಟ್ಟ ಗಜ ಘಟೆ ಸತ್ತು ಬಿದ್ದಿತು.

ಬಲರಾಮನು ತನ್ನ ಮುಸಲಾಯುಧದಿಂದ ಒಂದೇ ಸಮನೆ ದೈತ್ಯ ರನ್ನು ಕುಟ್ಟಿ ಕೊಲ್ಲುತ್ತಿದ್ದನು. ಅವನ ಉಪಟಳಕ್ಕೆ ತಾಳಲಾರದೆ ದೈತ್ಯ ಸೈನ್ಯ ವು ತತ್ತರಿಸಿ ಹೋಯಿತು. ಬಾಣಾಸುರನು ಕಳುಹಿಸಿದ ಸಂಗರ ವಿಶಾರ ದರು ಕೃಷ್ಣ ಬಲರಾಮರ ಯುದ್ಧ ನೈಪುಣ್ಯವನ್ನು ಕಂಡು ಬೆರಗಾಗಿ "ಗುಣಕ್ಕೆ ಮತ್ಸರವಿಲ್ಲ. ಈ ಕೃಷ್ಣನು ನಿಜವಾಗಿ ವೀರರ ವೀರನು. ಈ ಬಲರಾಮನು ಜಗಜಟ್ಟಿಯೇ ಸರಿ!" ಎಂದು ಹೊಗಳಿದರು. ಇನ್ನು ತಡ ಮಾಡಿದರೆ ಕೆಲಸ ಕೆಟ್ಟೀತೆಂದು ಬಗೆದು ಆ ರಾಕ್ಷಸರು ಮಾಯಾ ಯುದ್ಧ ವನ್ನು ಆರಂಭಿಸಿದರು. ಯಾದವರ ಸೈನ್ಯ ಈ ಕಪಟ ಯುದ್ಧಕ್ಕೆ ಕಂಗೆ ಟ್ಟರು. ಆಗ ಕೃಷ್ಣನು ತನ್ನವರಿಗೊದಗಿದ ಸಂಕಟವನ್ನು ಗಮನಿಸಿ ವಿಜ್ಞಾನಾಸ್ತ್ರವನ್ನು ಪ್ರಯೋಗಿಸಿ ಮಾಯಾವಿ ರಾಕ್ಷಸರನ್ನು ನಿಗ್ರಹಿಸಿ ದನು.

ಅಸುರರ ಮುಂಚೂಣಿ ಮುರಿಯಿತು. ಅವರ ಮೂಲ ಬಲದ ಮೇಲೆ ಯಾದವರ ನಿಶಿತಾಸ್ತ್ರಗಳು ಬೀಳತೊಡಗಿದವು. ದಾನವ ಮಹಾ ಭಟರು ಕೆಟ್ಟೋಡಿದರು. ಮಾಗಧನು ತನ್ನವರ ಪಾಡನ್ನು ನೋಡಿ ಮಹಾ ದುಃಖಕ್ಕೀಡಾದನು. ಆ ವೇಳೆಗೆ ಸರಿಯಾಗಿ ಇದರಿಗೆ ಹಲಧರನು ಕಾಣಿ ಸಲು ಜರಾಸಂಧನ ಶೋಕ ಕೋಪವಾಗಿ ಪರಿಣಮಿಸಿತು. ಅವನು ಬಲ ರಾಮನೊಡನೆ ಕಾಳಗಕ್ಕೆ ನಿಂತನು. "ನೇಗಿಲನ್ನು ತೆಗೆ, ಮುಸಲವನ್ನು ಹಿಡಿ. ನಿನ್ನ ತಲೆಗೆ ನನ್ನ ಗದೆಯನ್ನಿಕ್ಕದೆ ಬಿಡೆನು." ಎನ್ನುತ್ತ ಜರಾ ಸಂಧನು ಗದಾಯುದ್ಧಕ್ಕೆ ಬಲರಾಮನನ್ನಾಹ್ವಾನಿಸಿದನು. ವೀರನು ಯುದ್ಧದ ಕರೆಯನ್ನು ಮನ್ನಿಪದಿರುವುದುಂಟೆ? ಬಲರಾಮನು "ಲೇಸು ಮಾಡಿದೆ. ಹಲವು ಜನ್ಮಾಂತರಗಳ ಸುಕೃತರಾಶಿಯಿಂದು ಫಲಿಸಿತು. ನಿನ್ನಂಥ ವೀರವರೇಣ್ಯನೊಡನೆ ಕಾಳಗವೇನು ಸಣ್ಣ ಭಾಗ್ಯವೇ? ಬಾ" ಎಂದು ಮೂದಲಿಸುತ್ತ ಮುಸಲದಿಂದ ಹೊಡೆದನು. ಕಾಲದಂಡ ಸದೃಶ ವಾದ ಆ ಮುಸಲದ ಪೆಟ್ಟಿಗೆ ಜರಾಸಂಧನು ಗಾಸಿಯಾದನು. ಅವನು

ಸತ್ತನೆಂದೇ ನಂಬಿ ದೈತ್ಯರು ಪಲಾಯನ ಮಾಡತೊಡಗಿದರು. ಮೂರ್ಛೆಯಿಂದೆಚ್ಚತ್ತ ಜರಾಸಂಧನು ತನ್ನವರು ಹೆದರಿ ಓಡುತ್ತಿರುವುದನ್ನೂ, ಗೋಪಾರ್ಭಕರ ಅಮಿತ ಪರಾಕ್ರಮವನ್ನೂ ಕಂಡು ಎದೆಗುಂದಿ ತನಗಿನ್ನು ಜಯವಿಲ್ಲವೆಂದು ಬಗೆದನು. ಬಲರಾಮನು ಜರಾಸಂಧನನ್ನು ಮುಂದಲೆ ಹಿಡಿದೆಳೆದು ಕೆಡವಿ ಕೋಪಾಟೋಪದಿಂದ ಮತ್ತೆ ಮುಸಲವನ್ನೆತ್ತಿದನು. ಆ ಮುಹೂರ್ತಕ್ಕೆ ಸರಿಯಾಗಿ ನಭದಲ್ಲಿ ಘನಗರ್ಜನೆಯ ಧ್ವನಿಯಲ್ಲಿ ಒಂದು ವಾಣಿ ಕೇಳಿಸಿತು. "ಬಲರಾಮ, ಇವನನ್ನು ಬಿಡು. ಇವನಿಗೆ ನಿನ್ನ ಕೈಯಿಂದ ಸಾವು ಲಭಿಸದು. ಈಗ ನಿನಗೆ ಸಂಗ್ರಾಮ ಜಯವುಂಟಾಗಿದೆ. ಇನ್ನು ನಿಶ್ಚಿಂತೆಯಿಂದ ಮಧುರೆಗೆ ತೆರಳು.'' ಈ ಆಕಾಶವಾಣಿಯನ್ನು ಕೇಳಿ ಹಲಾಯುಧನು ಜರಾಸಂಧನ ಮುಂದಲೆಯನ್ನು ಕೈಬಿಟ್ಟು ''ಭಂಡ, ಹೋಗು. ಪ್ರಾಣದಾನ ಮಾಡಿದ್ದೇನೆ. ಬುದ್ಧಿವಂತನಾಗಿ ತಲೆಯುಳಿಸಿಕೋ. ಮತ್ತೆ ಯಾದವರನ್ನು ಕೆಣಕಿ ಕೆಡಬೇಡ.'' ಎಂದು ಹೇಳಿ ತಾನು ರಥಾರೂಢನಾಗಿ ಮಧುರೆಗೆ ಹಿಂತಿರುಗಿದನು. ಈ ವೇಳೆಗೆ ಕೃಷ್ಣನು ಶತ್ರುಗಳನ್ನು ಸದೆ ಬಡಿದು ಸಂಗರವನ್ನು ಮುಗಿಸಿ ವಿಜಯ ದುಂದುಭಿಯನ್ನು ಮೊಳಗಿಸಿ ನಗರಕ್ಕೆ ಹಿಂತಿರುಗಿದನು. ಮಧುರೆಯಲ್ಲಿ ಯಾದವರು, ಸ್ವರ್ಗದಲ್ಲಿ ದೇವತೆಗಳು, ಆನಂದದಿಂದ ಕೇಕೆ ಹಾಕಿದರು

## ದ್ವಾರವತಿ

ಈ ರೀತಿಯಾಗಿ ಮಗಧ ನೃಪಾಲನೂ ಅವನ ಬೆಂಬಲದ ರಾಜರೂ ಬಹಳ ಸೈನ್ಯ ಬಲದೊಡನೆ ಬಂದು ಕೃಷ್ಣಬಲರಾಮರ ಸಂಗಡ ಕಾಳಗ ಮಾಡಿ ಅವರ ಪರಾಕ್ರಮಾಗ್ನಿಯಲ್ಲಿ ತಮ್ಮ ಸರ್ವಸ್ವವನ್ನೂ ಹೋಮ ಮಾಡಿದರು. ಪದೇ ಪದೇ ಸೋತರೂ ಮಾಗಧನು ತನ್ನ ವೈರವನ್ನು ಬಿಡದೆ ಹಟದಿಂದ ಸೈನ್ಯವನ್ನು ಶೇಖರಿಸಿಕೊಂಡು ಮಧುರಾಪುರದ ಮೇಲೆ ದಂಡಯಾತ್ರೆ ಮಾಡುತ್ತಲೇ ಇದ್ದನು. ಒಟ್ಟು ಹದಿನೇಳು ಸಲ ಯುದ್ಧ ಮಾಡಿ ಮಾಗಧನು ಸೋತನು. ಕೃಷ್ಣ ಬಲರಾಮರು ಜರಾಸಂಧನನ್ನು ಹದಿನೇಳು ಸಲ ಕಾಳಗದಲ್ಲಿ ಹಿಮ್ಮೆಟ್ಟಿಸಿ ಓಡಿಸಿದರು. ಅನೇಕ ದೃಪ್ತ ಕ್ಷತ್ರಿಯರು ರಣದಲ್ಲಿ ಹತರಾದರು. ಭೂಭಾರ ತಗ್ಗಿತು. ಭಾರವನ್ನು

ಹೊತ್ತು ಬಗ್ಗಿಹೋಗಿದ್ದ ಆದಿಶೇಷನ ಹೆಡೆಗಳು ನೆಟ್ಟಗಾದುವು! ದಿಗ್ಗಜಗಳು ತಮ್ಮ ಭಾರ ಹಗುರವಾಗಲು ನೆಮ್ಮದಿಯಿಂದ ನಿಟ್ಟುಸುರುಬಿಟ್ಟುವು. ಹೀಗೆ ಕೃಷ್ಣನ ಅವತಾರದ ಉದ್ದೇಶ ತಕ್ಕ ಮಟ್ಟಿಗೆ ನೆರವೇರಿತಾದರೂ ಮತ್ತೆ ಹದಿನೆಂಟನೆಯ ಬಾರಿ ಮಾಗಧನು ಯುದ್ಧಕ್ಕೆ ಸನ್ನದ್ಧನಾಗಿ ಬರುತ್ತಿದೆಯೆಂದು ನಾರದನಿಂದ ತಿಳಿಯ ಬಂದುದರಿಂದ ಕೃಷ್ಣನ ಉತ್ಸಾಹ ತಗ್ಗಿಹೋಯಿತು. ಮಥುರೆಗೆ ಮತ್ತೆ ಹಿಂಸೆಯೊದಗಿತೆಂದು ಅವನು ಮರುಗಿದನು.

ಆಗ ಅರಮನೆಯಲ್ಲಿ ಕೃಷ್ಣನು ಯಾದವರ ಸಭೆಯನ್ನು ಸೇರಿಸಿ ಅದಕ್ಕೆ ಸಮಸ್ತ ಮಂತ್ರಿಗಳನ್ನೂ ಬರಮಾಡಿ ಎಲ್ಲರೆದುರಿಗೆ ಹೀಗೆ ಹೇಳಿದನು. "ಪುಣ್ಯವಶದಿಂದ ಇದುವರೆಗೆ ನಾವು ಯುದ್ಧದಲ್ಲಿ ಗೆದ್ದೆವು. ನಮಗೆ ಈಗ ಸಮಸ್ತ ರಾಜರೊಡನೆ ವಿರೋಧವುಂಟಾಗಿದೆ. ನೀವೆಲ್ಲ ಜರಾಸಂಧನ ಯುದ್ಧಗಳ ದೆಸೆಯಿಂದ ಬಹಳ ನೊಂದಿರುವಿರಿ. ಇನ್ನು ನಾವು ಉದಾಸೀನರಾಗಿರುವುದು ಸಮನಲ್ಲ. ಮಥುರೆಯಲ್ಲಿದ್ದುಕೊಂಡು ಇನ್ನೊಂದು ಮುತ್ತಿಗೆಯನ್ನು ಇದಿರಿಸುವುದು ಕಷ್ಟ. ಶತ್ರುಗಳಿಗೆ ದುರ್ಭೇದ್ಯವಾದ ಇನ್ನೊಂದು ದುರ್ಗವನ್ನು ಹುಡುಕಬೇಕು. ದುರ್ಗಗಳಲ್ಲೆಲ್ಲಾ ಗಿರಿದುರ್ಗ ಜಲದುರ್ಗಗಳೇ ಲೇಸು. ಸಪ್ತಾಂಗಗಳಲ್ಲಿ ದುರ್ಗ ರಾಜರಿಗೆ ಬಹಳ ಮುಖ್ಯವಲ್ಲವೆ? ಜರಾಸಂಧನ ಹಲವಾರು ದಂಡಯಾತ್ರೆಗಳಿಂದ ಮಥುರೆ ಬಹಳ ಕಂಗೆಟ್ಟಿದೆ. ಇನ್ನು ಜರಾಸಂಧನನ್ನು ಉದಾಸೀನ ಮಾಡುವುದು ಸಮನಲ್ಲ. ನನ್ನವರಿಗೆ ಹಿಂಸೆಯಾವರೆ ನನಗೆ ಬಹಳ ದುಃಖ. ಸೇವಕರ ಜೀವಭರಣವನ್ನು ಮಾಡುವುದು ನಮ್ಮ ಕರ್ತವ್ಯ." ಎಂದು ಹೇಳಿ ಆ ರಾತ್ರಿ ಕಳೆಯುತ್ತಲೂ ಅಣ್ಣನೊಡನೆ ಹೊಸದುರ್ಗವೊಂದನ್ನು ಹುಡುಕಲು ಹೊರಟುಬಿಟ್ಟನು.

ಉದಧಿ ವೇಷ್ಟಿತವಾದ ಕುಶಸ್ಥಲಿಯೆಂಬ ದುರ್ಗವು ಮಾನವರಿಗೆ ದುರ್ಗಮವಾದ ಸ್ಥಳ. ಅಲ್ಲಿ ಬಂಧುವರ್ಗಕ್ಕೆ ಮನೆಮಾಡಿ ಅವರನ್ನು ಮಾಗಧನ ಕಾಟದಿಂದ ರಕ್ಷಿಸಲು ನಿಶ್ಚಯಿಸಿ ಕೃಷ್ಣ ಬಲರಾಮರು ಸಾಹಸಪಟ್ಟು ಸಮುದ್ರದ ಮೇಲೆ ಒಂದು ಯೋಜನ ದೀರ್ಘವಾದ ಸೇತುವೆಯನ್ನು ಕಟ್ಟಿದರು. ಆಮೇಲೆ ಕುಶಸ್ಥಲಿಯಲ್ಲಿ ಹನ್ನೆರಡು ಯೊಜನದಷ್ಟು ಉದ್ದವೂ

ಹತ್ತು ಯೋಜನಸದಷ್ಟು ಅಗಲವೂ ಆದ ಪಟ್ಟಣ ಸಿದ್ಧವಾಯಿತು. ಅದರಲ್ಲಿ ಸಮಸ್ತ ಯಾದವರಿಗೂ ಅನುಕೂಲವಾದ ಮನೆಗಳನ್ನು ನಿರ್ಮಿಸಲಾಯಿತು. ಹರಿಬಲರ ಅರಮನೆಯು ಮುತ್ತಿನ ಮೇಲ್ಕಟ್ಟುಗಳಿಂದಲೂ ಕನಕ ತೋರಣ ಗಳಿಂದಲೂ ಹರಿನೀಲ ರತ್ನಗಳು ಹಾಸಿದ ನೆಲಗಟ್ಟಿನಿಂದಲೂ ಕೂಡಿ ನೋಡುವವರ ಮನಸ್ಸನ್ನು ಸೂರೆಗೊಳ್ಳುತ್ತಿತ್ತು. ಕನಕ ನಿರ್ಮಿತವಾದ ವಿವಿಧವಾತಾಯನಗಳಿಂದಲೂ ವಜ್ರಕವಾಟಗಳಿಂದಲೂ ಕೂಡಿ ಸುಂದರ ವಾದ ಉಪವನಗಳ ಮಧ್ಯೆ ವಿರಚಿತವಾದ ಹಲವು ದೇವ ಮಂದಿರಗಳು ಶೋಭಾಯಮಾನವಾಗಿದ್ದವು. ಹಲವು ಸಭಾಮಂದಿರಗಳಿಂದಲೂ ರಥಾ ಗಾರಗಳಿಂದಲೂ ಕೂಡಿದ ಆ ನಗರಿಗೆ ಮಹೋನ್ನತವಾದ ಕೋಟೆಯನ್ನು ಕಟ್ಟಿ ವಜ್ರದ ಕವಾಟಗಳನ್ನಿಟ್ಟು ವಿಶ್ವಕರ್ಮನು ತನ್ನ ಕರ್ತವ್ಯವನ್ನು ಮುಗಿ ಸಿದನು. ಶ್ರೀಕೃಷ್ಣನು ಆ ನಗರಕ್ಕೆ "ದ್ವಾರವತಿ" ಎಂದು ಹೆಸರಿಟ್ಟು ಸ್ವಜನಸಮೇತನಾಗಿ ಬಂದು ಸೇರಿದನು

ಹೊಸ ಊರಿನಲ್ಲಿ ತನ್ನವರನ್ನು ಸುರಕ್ಷಿತವಾಗಿ ನಿಲ್ಲಿಸಿ ಕೃಷ್ಣನು ಬಲ ರಾಮನೊಡನೆ ಹೊರಟು ಮಥುರೆಯನ್ನು ಮುತ್ತಿದ್ದ ಕಾಲಯವನನನ್ನು ಉಪಾಯದಿಂದ ಗೆದ್ದು ಮಾಗಧನಪರಿವಾರವನ್ನು ಧ್ವಂಸ ಮಾಡಿ ಅವರ ಸಮಸ್ತ ಐಶ್ವರ್ಯವನ್ನೂ ದ್ವಾರವತಿಗೆ ಸಾಗಿಸಿದನು.

## ರುಕ್ಮಿಣಿ

ಶ್ರೀಕೃಷ್ಣನ ಪರಾಕ್ರಮದ ಕಥೆಗಳು ನಾಡಿನಲ್ಲೆಲ್ಲ ಹಬ್ಬಿದುವು. ಅವನು ಸಾಧಿಸಿದ ಹಲವು ಅಮಾನುಷ ಕಾರ್ಯಗಳ ಸುದ್ದಿ ಎಲ್ಲೆಡೆಗಳಿಗೂ ವ್ಯಾಪಿಸಿತು. ಬೃಂದಾವನದಿಂದ ಹೊರಟು ಬಂದು ಲೋಕಕಂಟಕನಾದ ಕಂಸನನ್ನು ಕೊಂದು ಮೇಲಂತೂ ಶ್ರೀಕೃಷ್ಣನ ಚರಿತ್ರೆ ಲೋಕವಿಖ್ಯಾತ ವಾಯಿತು. ಹೀಗಿರುವಾಗ ವಿದರ್ಭದೇಶದ ದೊರೆಯಾದ ಭೀಷ್ಮಕನು ತನ್ನ ಮೋಹದ ಮಗಳಾದ ರುಕ್ಮಿಣಿಯನ್ನು ಯದುಶ್ರೇಷ್ಠನಾದ ಶ್ರೀಕೃಷ್ಣನಿಗೆ ಕೊಟ್ಟು ಮದುವೆ ಮಾಡ ಬಗೆದು ತನ್ನ ಆಪ್ತಬಂಧುಗಳೊಡನೆ ಆಲೋಚಿಸಿ ದನು. ಪರಮಸುಂದರಿಯಾದ ರುಕ್ಮಿಣಿಗೆ ಶ್ರೀಕೃಷ್ಣನೇ ಸರಿಯಾದ ವರ ನೆಂದು ಎಲ್ಲರೂ ಅಭಿಪ್ರಾಯಪಟ್ಟರು. ಆದರೆ ಆತನ ಹಿರಿಯ ಮಗನಾದ

ರುಕ್ಮಿಯು ಇದನ್ನು ವಿರೋಧಿಸಿದನು. ಅವನಿಗೆ ಶಿಶುಪಾಲನಲ್ಲಿ ಬಹಳ ಆದರ. ಕೃಷ್ಣನು ನಂದಗೋಪನ ಮಗನಾದ್ದರಿಂದ ಕುಲದಲ್ಲಿ ಕೀಳೆಂದು ಅವನ ತಾತ್ಪರ್ಯ. ತಂದೆಯ ನಿರ್ಣಯವನ್ನು ಅವನು ವಿರೋಧಿಸಿದನು. ಶಿಶುಪಾಲನೇ ಅನುರೂಪನಾದವರನೆಂದೂ ರುಕ್ಮಿಣಿಯನ್ನು ಅವನಿಗೇ ಕೊಡ ಬೇಕೆಂದೂ ಅವನು ಹಟ ಹಿಡಿದನು. ಮಗನ ಹಟಕ್ಕೆ ತಂದೆ ಸೋಲಬೇ ಕಾಯಿತು. ಚೇದಿ ಭೂಪಾಲನಾದ ಶಿಶುಪಾಲನಿಗೆ ರುಕ್ಮಿಣಿಯನ್ನು ಕೊಡುವುದೆಂದು ನಿರ್ಣಯವಾಯಿತು. ಲಗ್ನಪತ್ರಿಕೆಗಳು ಹೊರಟವು. ಮದುವೆಯ ಸಿದ್ಧತೆ ಬಹಳ ಸಡಗರದಿಂದ ಸಾಗತೊಡಗಿತು.

ರುಕ್ಮಿಣಿಯ ಮದುವೆ ನಿಶ್ಚಿತವಾದುದನ್ನು ಕೇಳಿ ಪುರಜನರು ಬಹಳ ಹರ್ಷಿತರಾಗಿ ನಗರದ ಬೀದಿಗಳನ್ನೆಲ್ಲ ಅಲಂಕರಿಸಿದರು. ಎಲ್ಲೆಲ್ಲಿಯೂ ಗುಡಿತೋರಣಗಳು ಶೋಭಿಸಿದುವು. ಆದರೆ ರುಕ್ಮಿಣಿಯ ಮನಸ್ಸಿನಲ್ಲಿ ಮಾತ್ರ ಉತ್ಸಾಹ ಬತ್ತಿಹೋಯಿತು. ಅಣ್ಣನು ಮಾಡಿದ ನಿರ್ಣಯವನ್ನು ಕೇಳಿ ಅವಳು ದುಃಖದಲ್ಲಿ ಮುಳುಗಿದಳು ಅಂಥವನ ಜತೆಯಲ್ಲಿ ಹುಟ್ಟಿದ ತಾನು ಕೇವಲ ಪುಣ್ಯವಿಹೀನೆಯೆಂದು ತನ್ನನ್ನೇ ಬೈದುಕೊಂಡಳು ; ಶ್ರೀಕೃಷ್ಣನ ಮೂರ್ತಿವಿಲಾಸವನ್ನು ನೆನೆನೆನೆದು ಮರುಗಿದಳು. ಅವಳ ಚಿತ್ತವು ಕೃಷ್ಣಾರ್ಪಿತವಾಗಿತ್ತು. ಅವಳು ಶ್ರೀಕೃಷ್ಣನ ದರ್ಶನ ಕಾಂಕ್ಷಿಣಿ ಯಾಗಿ ಊಟ ನಿದ್ದೆಗಳನ್ನು ಬಿಟ್ಟು, ಯೋಚಿಸತೊಡಗಿದಳು. ತಾನು ಮನ ಸಾ ವರಿಸಿದ ಶ್ರೀಕೃಷ್ಣನನ್ನು ಸೇರದಿದ್ದರೆ ತನ್ನ ಬದುಕು ನಿರರ್ಥಕವೆಂದು ಬಗೆದು ತನ್ನ ಇನಿಯನಿಗೆ ತಾನೇ ಹೇಳಿಕಳುಹಿಸಲು ನಿರ್ಧರಿಸಿಕೊಂಡಳು. ಕೂಡಲೆ ಅವಳು ತನಗೆ ಆಪ್ತನಾದ ಬ್ರಾಹ್ಮಣನೊಬ್ಬನನ್ನು ಬರಮಾಡಿ ಅವ ನಿಗೆ ತನ್ನ ಮನೋದಯವನ್ನು ತಿಳಿಸಿ ದ್ವಾರಕಿಗೆ ಹೋಗಿ ಶ್ರೀಕೃಷ್ಣನನ್ನು ಕಂಡು ಬರಬೇಕೆಂದು ಬೇಡಿದಳು. ಆತನು ರುಕ್ಮಿಣಿಯ ಮಾತನ್ನು ಮೆಚ್ಚಿ ಕೊಂಡು ಕೂಡಲೆ ರುಕ್ಮಿಣಿಯ ಪತ್ರವನ್ನು ತೆಗೆದುಕೊಂಡು ದ್ವಾರಕಿಗೆ ಪ್ರಯಾಣ ಹೊರಟನು.

ಅರಮನೆಯಲ್ಲಿ ಸುಖಾಸೀನನಾಗಿದ್ದ ಶ್ರೀ ಕೃಷ್ಣನು ಬ್ರಾಹ್ಮಣನೊ ಬ್ಬನು ತನಗಾಗಿ ಬಂದಿರುವ ಸುದ್ದಿ ಕೇಳಿ ಕೂಡಲೆ ಎದ್ದು ಬಂದು ಆತನನ್ನು ಆದರದಿಂದ ಸ್ವಾಗತಿಸಿ ಭದ್ರಾಸನದ ಮೇಲೆ ಕುಳ್ಳಿರಿಸಿ ಪಾದ್ಯ ಅರ್ಘ್ಯ

ಆಚಮನೀಯಾದಿಗಳನ್ನು ಕೊಟ್ಟು ಉಪಚರಿಸಿ ಕುಶಲ ಪ್ರಶ್ನೆ ಮಾಡಿ ಕೊಂಚ ಹೊತ್ತು ವಿಶ್ರಾಂತಿಯಾದ ಮೇಲೆ ಮೃಷ್ಟಾನ್ನ ಭೋಜನ ಮಾಡಿಸಿ ಏಕಾಂತದಲ್ಲಿ ಕುಳ್ಳಿರಿಸಿಕೊಂಡು "ಅಯ್ಯಾ, ತಾವು ಎಲ್ಲಿಂದ ಬಂದಿರಿ? ತಮ್ಮ ಬರವಿನ ಉದ್ದೇಶವೇನು? ಬಹುದೂರ ನಡೆದು ಆಯಾಸಪಟ್ಟಿರುವಿರಿ. ನಿಮ್ಮ ಕೆಲಸವೇನಿದ್ದರೂ ಸಂಶಯಪಡದೆ ಹೇಳಬಹುದು" ಎಂದನು. ಕೃಷ್ಣನ ಈ ಮಧುರೋಕ್ತಿಗಳನ್ನು ಕೇಳಿ ಆನಂದ ತುಂದಿಲ ಹೃದಯನಾದ ಆ ವಿಪ್ರೋತ್ತಮನು ಹೆಚ್ಚು ಮಾತಿಲ್ಲದೆ, ತಾನು ತಂದಿದ್ದ ರುಕ್ಮಿಣಿಯ ಪತ್ರವನ್ನು ಶ್ರೀ ಕೃಷ್ಣನಿಗೆ ಭಕ್ತಿಯಿಂದ ಒಪ್ಪಿಸಿದನು.

ಆ ಕಾಗದವನ್ನು ಕೈಗೆ ತೆಗೆದುಕೊಂಡು ಶ್ರೀ ಕೃಷ್ಣನು ತಾನೇ ಮೆಲ್ಲಗೆ ಓದತೊಡಗಿದನು. "ಕೃಷ್ಣ, ನಿನ್ನ ಗುಣಗಳನ್ನು ಕೇಳಿ ನನ್ನ ಕಿವಿಗಳು ಸೋತುವು. ನನ್ನ ಮನಸ್ಸು ಕಿವಿಗಳ ದಾರಿಯನ್ನೇ ಹಿಡಿದು ನಿನ್ನ ಪದಾಬ್ಜವನ್ನು ಸೇರಿದೆ. ದೇವ! ನೀನು ನನ್ನ ಇಷ್ಟಾರ್ಥವನ್ನು ಸಲ್ಲಿಸಬೇಕು. ಲಜ್ಜಾಭಿಮಾನಗಳನ್ನು ಲೆಕ್ಕಿಸದೆ ನಿನ್ನಲ್ಲಿಗೆ ಈ ವಿಜ್ಞಾಪನೆಯನ್ನು ಕಳುಹಿಸುತ್ತಿದ್ದೇನೆ. ಕೃಷ್ಣಾ! ಭಕ್ತ ಪ್ರಿಯವೆನಿಸಿದ ನಿನ್ನ ಅಂಘ್ರಿ ಕಮಲಾಶ್ರಯವನ್ನು ಬಯಸಿದ್ದೇನೆ. ಅದು ದುರ್ಲಭವೆಂದೆನ್ನದೆ ಆಶ್ರಿತ ಮನೋರಥಕಾರಿಯಾದ ನೀನು ನನ್ನ ಮನದ ಪ್ರೀತಿಯನ್ನು ಸಲ್ಲಿಸು.

"ನಾಳೆ ನನ್ನನ್ನು ಶಿಶುಪಾಲನಿಗೆ ಕೊಟ್ಟು ಮದುವೆ ಮಾಡಲು ನಮ್ಮ ಅಣ್ಣಾ ಸಿದ್ಧಪಡಿಸಿಕೊಂಡಿದ್ದಾನೆ. ಅದ್ದರಿಂದ ಇನ್ನು ಆಲಸ್ಯಕ್ಕೆ ಅವಕಾಶವಿಲ್ಲ. ನನ್ನ ಪ್ರಾರ್ಥನೆಯನ್ನು ಅಲಕ್ಷ್ಯ ಮಾಡದೆ ಸೈನ್ಯ ಸಮೇತನಾಗಿ ಬಂದು ಇಲ್ಲಿ ನೇರಿರಬಹುದಾದ ಚೈದ್ಯ ಮಾಗಧ ಸಾಳ್ವ ಮೊದಲಾದ ಸಮಸ್ತ ದುಷ್ಟ ರಾಜರನ್ನೂ ದಂಡಿಸಿ ನನ್ನ ಕೈ ಹಿಡಿಯಬೇಕು.

"ಬಂಧುಗಳನ್ನು ಪರಿಭವಿಸಿ ಅವರ ಅಂತಃಪುರದಲ್ಲಿರುವ ಮಾನಿನಿಯನ್ನು ಪಡೆಯುವ ಬಗೆಯಾವುದೆಂದು ಶಂಕಿಸಬಾರದು. ಮದುವೆಯ ದಿನ ಬೆಳಿಗ್ಗೆ ನಮ್ಮ ನಗರದ ಹೊರವಳಯದಲ್ಲಿರುವ ಅಂಬಿಕಾ ದೇವಾಲಯಕ್ಕೆ ಬರುತ್ತೇನೆ. ಅದು ನಮ್ಮ ಮನೆಯ ಸಂಪ್ರದಾಯ. ಆ ವೇಳೆಗೆ ಅಲ್ಲಿಗೆ ಬಂದು ನನ್ನನ್ನು ಉದ್ಧರಿಸಬೇಕು.

"ನನ್ನ ಹಿರಿಯರು ನನ್ನನ್ನು ನಿನಗೇ ಕೊಡಬೇಕೆಂದು ಮೊದಲು

ನಿರ್ಣಯಿಸಿದ್ದರಾದ್ದರಿಂದ ಅವರು ನಿನಗೆ ಮನಸಾ ಕನ್ಯಾದಾನ ಮಾಡಿದ್ದಾರೆ."

ಭೀಷ್ಮಕನಂದನೆಯ ಈ ಪತ್ರವನ್ನೋದುತ್ತಾ ಓದುತ್ತಾ ಕೃಷ್ಣನ ಕಣ್ಣುಗಳು ಒದ್ದೆಯಾದುವು. ಅದನ್ನು ಓದಿಯಾದ ಮೇಲೆ ಪುರುಷೋತ್ತಮನು ಆವಿಪ್ರೋತ್ತಮನ ಕಡೆಗೆ ತನ್ನ ಕಟಾಕ್ಷವನ್ನು ಬೀರಿದನು. ಅದನ್ನು ಗಮನಿಸಿದ ಆ ಬ್ರಾಹ್ಮಣನು "ಕೃಪಾರ್ಣವ! ನನ್ನನ್ನೇನು ನೋಡುವೆ? ರುಕ್ಮಿಣಿಯ ಪತ್ರದ ತಾತ್ಪರ್ಯವನ್ನು ಗ್ರಹಿಸಿದೆಯಲ್ಲವೆ? ಇನ್ನು ವಿಳಂಬ ಮಾಡಿದರೆ ಕೆಲಸ ಕೆಡುತ್ತದೆ. ಆಕೆಯ ಪ್ರಾರ್ಥನೆ ನಿನಗೆ ಒಪ್ಪಿತವಾದರೆ ಕೂಡಲೆ ಮುಂದಿನ ಕೆಲಸಕ್ಕೆ ತೊಡಗಬೇಕು." ಎಂದು ನುಡಿದನು. ಆ ಕೂಡಲೆ ಕೃಷ್ಣನು ರಥಾರೂಢನಾಗಿ ಬಲರಾಮನನ್ನೂ ಜತೆಯಲ್ಲಿ ಕರೆದುಕೊಂಡು ಸೈನ್ಯ ಸಮೇತನಾಗಿ ಭೀಷ್ಮಕನನಗರದ ಕಡೆಗೆ ಹೊರಟುಬಿಟ್ಟನು. ತನ್ನ ರಾಯಭಾರ ಫಲಿಸಿದುದಕ್ಕೆ ಸಂತುಷ್ಟನಾದ ಆ ಬ್ರಾಹ್ಮಣನು ಕೃಷ್ಣನೊಡನೆ ರಥದಲ್ಲಿ ಕುಳಿತು ಹೊರಟನು.

ಶ್ರೀ ಕೃಷ್ಣನು ಮಿತಪರಿವಾರದೊಡನೆ ಮಹಾವೇಗದಿಂದ ಪ್ರಯಾಣ ಮಾಡಿ ಮೂರನೆಯ ದಿನ ವಿದರ್ಭದೇಶದ ರಾಜಧಾನಿಯ ಹೊರವಳಯದಲ್ಲಿ ರಥವನ್ನು ನಿಲ್ಲಿಸಿ ರುಕ್ಮಿಣಿಯಿಂದ ಪತ್ರವನ್ನು ತಂದಿದ್ದ ಆ ಬ್ರಾಹ್ಮಣನನ್ನು ಕಳಗಿಳಿಸಿ "ಎಲೈ ವಿಪ್ರ, ನೀನಿನ್ನು ಊರೊಳಕ್ಕೆ ಹೋಗು." ಎಂದನು. ಅವನು ತಲೆಬಾಗಿ ವಂದಿಸಿ "ಕರುಣಾಸಾಗರನೆ! ನಿನ್ನ ಆಗಮನ ವೃತ್ತಾಂತವನ್ನು ಈಗ ರುಕ್ಮಿಣಿಗೆ ತಿಳಿಸುತ್ತೇನೆ. ಆಕೆಗೆ ನೀನು ಅಭಯ ಸಂದೇಶವನ್ನು ನೀಡಬೇಕು" ಎಂದನು. "ಅಯ್ಯಾ, ನೀನು ನನ್ನ ಮನಸ್ಸನ್ನರಿಯೆ. ಕಾಂತೆಯ ಚಿಂತೆಯಲ್ಲಿ ಹೋದಿರುಳು ನನಗೆ ನಿದ್ರೆ ಹತ್ತಲಿಲ್ಲ. ನೀನು ಬೇಗನೆ ಪುರಪ್ರವೇಶ ಮಾಡಿ ರುಕ್ಮಿಣಿಗೆ ಎಲ್ಲ ಸಂಗತಿಯನ್ನೂ ತಿಳಿಸು" ಎಂದು ಹೇಳಿ ಕೃಷ್ಣನು ಆ ಬ್ರಾಹ್ಮಣನನ್ನು ಕಳುಹಿಸಿಕೊಟ್ಟನು.

ಇತ್ತ ರುಕ್ಮಿಣಿಯು ತನ್ನ ಪ್ರಯತ್ನವೇನಾಗುವುದೋ ಎಂದು ಯೋಚಿಸಿ ಕಳವಳಗೊಂಡು ಹೊತ್ತು ಕಳೆಯುತ್ತಿದ್ದಳು. ಮದುವೆಯದಿನ ಬಂದರೂ ತಾನು ಕಳುಹಿಸಿದ ಬ್ರಾಹ್ಮಣನು ಬಾರದಿದ್ದರಿಂದ ಅವಳ ವ್ಯಥೆ ದ್ವಿಗುಣವಾಯಿತು. ಶಿಶುಪಾಲಾದಿಗಳು ಬಂದರೆಂಬ ವಾರ್ತೆ ಅವಳ ಚಿತ್ತ

ಶಾಂತಿಯನ್ನು ಪೂರ್ಣವಾಗಿ ಹಾಳುಮಾಡಿತ್ತು. ತಾನು ನಿರ್ಭಾಗ್ಯೆಯಾದುದರಿಂದಲೇ ಒಡಹುಟ್ಟಿದ ಅಣ್ಣನೇ ಹೀಗೆ ವಿರೋಧಿಯಾಗಿ ಕೊರಳು ಕೊಯ್ಯುತ್ತಿದ್ದಾನೆಂದು ಬಗೆದು ಅವಳು ತನ್ನ ಹೀನ ಅದೃಷ್ಟವನ್ನು ಬೈದುಕೊಂಡಳು. ಅವಳ ಮನಸ್ಸಿನಲ್ಲಿ ಕೃಷ್ಣದರ್ಶನಾಕಾಂಕ್ಷೆ ಬಲಿಯಿತು. ಅವಳು ಒಂದುಕ್ಷಣ ತನ್ನ ಕಣ್ಣುಮುಚ್ಚಿಕೊಂಡು ಕೃಷ್ಣನ ಚರಣವನ್ನು ನೆನೆಯುತ್ತಿರಲು ಅವಳ ಎಡದ ಕಣ್ಣು ಅದುರಿತು! ಆ ಶುಭ ಶಕುನವನ್ನು ಕುರಿತು ಸಖಿಯೊಡನೆ ಮಾತನಾಡುತ್ತಿರಲು ಆವೇಳೆಗೆ ಸರಿಯಾಗಿ ದೂರದಲ್ಲಿ ಆ ಬ್ರಾಹ್ಮಣನು ಕಾಣಿಸಿದನು. ದೂರದಿಂದಲೇ ಅವನ ಮುಖಭಾವವನ್ನು ಗಮನಿಸಿದ ರುಕ್ಮಿಣಿಯು ಧೈರ್ಯ ವಹಿಸಿದಳು ಆ ವಿಪ್ರನು ಸಮಿಾಪಿಸಿ ಬಂದು "ಅಮ್ಮಾ, ನೀನು ಬಹಳ ಭಾಗ್ಯಶಾಲಿನಿ. ಅಸುರಾಂತಕನು ನಿನಗಾಗಿ ಬಂದಿದ್ದಾನೆ; ನಗರದ ಹೊರಗೆ ಬೀಡು ಬಿಟ್ಟಿದ್ದಾನೆ. ಕೃಷ್ಣನಂಥ ಕೃಪಾನಿಧಿಗಳಿನ್ನಾರಿದ್ದಾರೆ? ಅವನು ಭಕ್ತಾಧೀನನು. ನೀನು ಧನ್ಯಳಾದೆ ಇನ್ನು ಚಿಂತೆಯನ್ನು ಬಿಡು. ನಿನ್ನ ಪುಣ್ಯದಿಂದ ನನ್ನ ಜನ್ಮ ಸಫಲವಾಯಿತು. ನಿನ್ನ ಸಂದೇಶವನ್ನೊಯ್ದ ಕಾರಣ ಆ ಮುನಿವಂದಿತಾಂಘ್ರಿಯನ್ನು ಕಂಡು ನಾನು ಕೃತಾರ್ಥನಾದೆನು" ಎಂದು ವಿಪ್ರಳಾನಂದದಿಂದ ನುಡಿಯಲು ರುಕ್ಮಿಣಿಯು ಕೇಳಿ ಪುಳಕಿತಾಂಗಳಾಗಿ ಇನ್ನೇನೂ ತೋರದೆ ಆ ಬ್ರಾಹ್ಮಣನಿಗೆ ದಂಡನಮಸ್ಕಾರ ಮಾಡಿದಳು.

ಶ್ರೀಕೃಷ್ಣನು ಕುಂಡಿನ ಪುರಕ್ಕೆ ಆತುರದಿಂದ ಹೋಗಿರಲು ಬಲರಾಮ ಯಾದವ ಸೈನ್ಯದ ಜತೆಯಲ್ಲಿ ಪ್ರಯಾಣ ಮಾಡುತ್ತ ಆ ನಗರಕ್ಕೆ ಕೊಂಚ ದೂರದಲ್ಲಿ ಬೀಡುಬಿಟ್ಟನು. ಕೃಷ್ಣಬಲರಾಮರು ಬಂದಿರುವರೆಂಬ ವಾರ್ತೆ ಅದು ಹೇಗೋ ಊರಜನಕ್ಕೆ ತಿಳಿಯಿತು. ಅವರೆಲ್ಲ ಸಂಭ್ರಮದಿಂದ ಬಂದು ಕೃಷ್ಣನ ದರ್ಶನವನ್ನು ಪಡೆದರು ಭೀಷ್ಮಕನು ಈ ಸುದ್ದಿ ತಿಳಿದು ಮಹಾ ಸಂತೋಷದಿಂದ ಬಂದು ಅವರನ್ನು ಇದಿರುಗೊಂಡು ಬೀಡಾರಕ್ಕೆ ಕರೆದೊಯ್ದು ಭೋಜನಾದಿಗಳನ್ನು ಮಾಡಿಸಿ ಸತ್ಕರಿಸಿದನು.

ಆ ವೇಳೆಗೆ ಮೇಘಗರ್ಜನೆಯೋಪಾದಿಯಲ್ಲಿ ವಾದ್ಯಧ್ವನಿ ಕೇಳಿಸಿತು. ರುಕ್ಮಿಣಿಯು ಅವರ ಕುಲಪದ್ಧತಿಯಂತೆ ಅಂಬಿಕೆಯ ಅರ್ಚನೆಗೆ ಹೊರಟಿದ್ದಳು. ಜತೆಯಲ್ಲಿ ಅನೇಕ ಬ್ರಾಹ್ಮಣರು, ಸುವಾಸಿನಿಯರು ಮುಂತಾದವರು

ಪೂಜಾಸಾಮಾಗ್ರಿಗಳೊಡನೆ ನಡೆಯುತ್ತಿದ್ದರು. ಆ ವಾದ್ಯ ಧ್ವನಿ ಕೇಳು ತ್ತಲೇ ಕೃಷ್ಣನು ತನ್ನ ಬೀಡಾರವನ್ನು ಬಿಟ್ಟು ಹೊರಟು ಪುರದ ಹೊರಗೆ ರಥವನ್ನು ಸಜ್ಜಾಗಿ ನಿಲ್ಲಿಸಿ ದೇವಾಲಯದ ಹತ್ತಿರ ಕಾದಿದ್ದನು. ಆ ವೇಳೆಗೆ ರುಕ್ಮಿಣಿಯು ಪರಿವಾರ ಸಮೇತಳಾಗಿ ಆಲಯವನ್ನು ಸಮೀಪಿಸಿದಳು. ಲಕ್ಷ್ಮೀಲೋಲನನ್ನೇ ಮನದಲ್ಲಿ ಧ್ಯಾನಿಸುತ್ತ ಅವನನ್ನು ಕಾಣದೆ ಕಳವಳಿ ಸುತ್ತ ಅಂಬಿಕೆಯ ಪೂಜಾವಂದನಾದಿಗಳನ್ನು ಮಾಡಿ ಆಲಯದಿಂದ ಹೊರ ಬಿದ್ದಳು. ನೂಪುರಧ್ವನಿ ಮಾಡುತ್ತ ಎಡಬಲಗಳನ್ನು ಕಾತರನಯನಗಳಿಂದ ನೋಡುತ್ತ ಕೃಷ್ಣನನ್ನು ಕಾಣದೆ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ರುಕ್ಮಿಣಿ ಮೆಲ್ಲನೆ ನಡೆಯುತ್ತಿದ್ದಳು. ಆಗ ಕೃಷ್ಣನು ಹಠಾತ್ತಾಗಿ ತನ್ನ ರಥವನ್ನು ಅಲ್ಲಿಗೆ ತಂದು ರುಕ್ಮಿಣಿಯನ್ನೆತ್ತಿ ಅದರಲ್ಲಿ ಕೂಡಿಸಿಕೊಂಡು ವಿರೋಧಿಸಿದ ಒಬ್ಬೊಬ್ಬರು ರಾಜಭಟರನ್ನು ಹೊಡೆದಟ್ಟಿ ರಥವನ್ನು ವೇಗವಾಗಿ ದ್ವಾರಕೆಯ ಕಡೆಗೆ ಓಡಿಸತೊಡಗಿದನು.

ಕೃಷ್ಣನ ಈ ಕೃತ್ಯವನ್ನು ಕಂಡು ಕುಪಿತರಾದ ಸೈನಿಕರು ಅವನ ರಥ ವನ್ನು ಸುತ್ತುಗಟ್ಟಿದರು. ಆದರೆ ಅವನ ಬಾಣದ ಪೆಟ್ಟಿಗೆ ಸಹಿಸಿ ನಿಲ್ಲುವುದು ಅವರಿಂದಾಗಲಿಲ್ಲ. ರುಕ್ಮಿಗೆ ಈ ಸಂಗತಿ ತಿಳಿದು ಅವನು ಮೂಲಬಲವನ್ನೇ ಕೃಷ್ಣನ ಮೇಲೆ ಯುದ್ಧಕ್ಕೆ ಕಳುಹಿಸಿದನು. ಆದರೇನು ? ಕೃಷ್ಣನು ಬಲಭದ್ರನನ್ನು ಅವರೊಡನೆ ಕಾಳಗಕ್ಕೆ ನಿಲ್ಲಿಸಿ ತಾನು ರುಕ್ಮಿಣಿಯೊಡನೆ ನಿಜ ಪುರದ ಕಡೆ ಧಾವಿಸಿದನು ಯಾದವ ಸೈನ್ಯದವರು ವಿದರ್ಭ ಸೈನ್ಯದೊಡನೆ ನಡೆಸುತ್ತಿದ್ದ ಘನಘೋರ ಸಂಗ್ರಾಮವನ್ನು ನೋಡಿ ರುಕ್ಮಿಣಿ ನಡುಗಿದಳು. ತನಗೆಲ್ಲಿ ಮತ್ತೆ ಪರಾಭವವೋ ಎಂಬ ಅಂಜಿಕೆ ಅವಳನ್ನು ಬಾಧಿಸಿತು. ಕೃಷ್ಣನು ಅವಳಿಗೆ ಧೈರ್ಯ ಹೇಳಿ ಸಂತೈಸಿದನು. ಚಿಕ್ಕದಾದ ಸೂರ್ಯ ಮಂಡಲವನ್ನು ಮಹಾಮೇಘ ಸಮೂಹವು ಕ್ಷಣಕಾಲ ಮುಚ್ಚಿಕೊಂಡರೂ ಬಿರುಗಾಳಿಗೆ ಸಿಕ್ಕಿ ದಿಕ್ಕು ದಿಕ್ಕಿಗೆ ಹರಿದುಹೋಗುವ ಹಾಗೆ ಕೃಷ್ಣ, ಸಾತ್ಯಕಿ, ಬಲರಾಮ, ಉದ್ಧವ ಮುಂತಾದ ಯದುವೀರರ ಬಾಣ ಪರಂಪರೆಗೆ ಸಿಕ್ಕಿ ನೊಂದು ಶತ್ರು ಸೈನ್ಯವು ದಿಕ್ಕಾಪಾಲಾಗಿ ಚೆದರಿ ಓಡಿಹೋಯಿತು. ಯೋಧರು ಬಿಲ್ಲನ್ನು ಬಿಸುಟು ಓಡಿದರು. ಎದೆದಲ್ಲಣದ ಕೆಲವರು ಕೃಷ್ಣ ಬಲರಾಮರಿಗೆ ಶರಣಾಗತರಾದರು.

ಇತ್ತ ಜರಾಸಂಧ, ಸಾಳ್ವ ಮೊದಲಾದ ರಾಜರು ಶಿಶುಪಾಲನಲ್ಲಿಗೆ ಹೋಗಿ "ಇನ್ನೇಳು ನಡೆ, ನಿಮ್ಮೂರಿಗೆ ಹೊರಡು. ಇದು ನಮಗೆ ಶುಭ ಕಾಲವಲ್ಲ. ಭೂಮಿಯ ಮೇಲೆ ನಮಗೆ ಬಾಲೆಯರು ಎಷ್ಟು ಜನ ಸಿಕ್ಕುವುದಿಲ್ಲ? ಈ ಯಾದವರ ಸಹವಾಸವೇ ಹೀಗೆ. ಮದುವೆಗೆಂದು ಬಂದು ಬಾಣದ ಪೆಟ್ಟಿಗೆ ಮೈಗೊಡುವಂತಾಯಿತು. ಈ ಪಶುಪಾಲಕರಿಗೆ ಬುದ್ಧಿಯಿಲ್ಲ." ಎಂದು ಹೇಳಿ ಅವನನ್ನು ಹೊರಡಿಸಿಕೊಂಡು ವಿದರ್ಭ ಪಟ್ಟಣದಿಂದ ವಿಫಲ ಮನೋರಥರಾಗಿ ಪ್ರಯಾಣ ಮಾಡಿದರು.

ಇತ್ತ ಭೀಷ್ಮಕನ ಹಿರಿಯ ಮಗ ರುಕ್ಮಿಯೂ ತನ್ನ ಪ್ರಯತ್ನವು ಹೀಗೆ ಭಂಗಪಟ್ಟುದಕ್ಕೆ ಸಿಟ್ಟುಗೊಂಡು ಆ ಅಂಗನಾ ಚೋರನನ್ನು ನಿಗ್ರಹಿಸಿ ತಂಗಿಯನ್ನು ಬಿಡಿಸಿಕೊಂಡು ಬಂದ ಹೊರತು ತನ್ನ ಪಟ್ಟಣವನ್ನೇ ಪ್ರವೇಶಿಸುವುದಿಲ್ಲವೆಂದು ಅರಸರ ಇದಿರಿನಲ್ಲಿ ಶಪಥ ಮಾಡಿ ರಥವೇರಿ ಕಾಳಗಕ್ಕೆ ಹೊರಟನು. ಆ ದುಷ್ಟಮತಿಯು ಕೃಷ್ಣನಾರೆಂಬುದನ್ನು ಗಮನಿಸದೆ ಆ ದನುಜಾಂತಕನಿಗೆ ವಿರೋಧವಾಗಿ ರಥಾರೂಢನಾಗಿ ಹೊರಟನು. ಹೀಗೆ ಬೆನ್ನಟ್ಟಿ ಹೋಗುತ್ತಾ ಕೃಷ್ಣನು ನರ್ಮದೆಯನ್ನು ದಾಟುವ ಭರದಲ್ಲಿದ್ದಾಗ ರುಕ್ಮಿಯು ಅವನನ್ನು ಕೂಗಿ ನಿಲ್ಲಿಸಿದನು. "ಎಲವೋ ಹೆಂಗಳ್ಳ, ಹೋಗದಿರು. ತಡೆ, ಯುದ್ಧಕ್ಕೆ ಸಿದ್ಧನಾಗು, ನಿನ್ನ ಭುಜಬಲವನ್ನು ತೋರು" ಎಂದು ಅಬ್ಬರಿಸುತ್ತಾ ಬಿಲ್ಲಿಗೆ ಕೈ ಹಾಕಿದನು. ಆಗ ಕೃಷ್ಣನು ರುಕ್ಮಿಯ ಮೇಲೆ ಒಮ್ಮಿಂದೊಮ್ಮೆ ಕೈ ಮಾಡದೆ ತಡೆಯಲು ರುಕ್ಮಿಯು ಕೃಷ್ಣನು ತನಗೆ ಅಂಜಿದನೆಂದೇ ಭಾವಿಸಿ "ಕೃಷ್ಣಾ, ನೀನು ಗೋಪಾಲಕರ ಬಳಗಕ್ಕೆಲ್ಲಾ ಉತ್ತಮನಲ್ಲವೇ? ತಪ್ಪೇನು? ನನ್ನೊಡನೆ ಬಿಲ್ಲು ಹಿಡಿದು ಯುದ್ಧ ಮಾಡು. ಯುದ್ಧಕ್ಕೆ ನಿಲ್ಲಲೊಲ್ಲೆಯಾದರೆ ನನ್ನ ತಂಗಿಯನ್ನು ಬಿಟ್ಟು ಕೊಡು. ಸೋತೆನೆಂದು ಕಾಲಿಗೆರಗು. ನೀನು ಮರೆಹೊಕ್ಕರೆ ನಿನ್ನ ಪ್ರಾಣವನ್ನುಳಿಸುತ್ತೇನೆ. ಹಾಗಲ್ಲದಿದ್ದರೆ ಆ ಶಿವನೇ ಅಡ್ಡಬಂದರೂ ನಿನ್ನ ಪ್ರಾಣವನ್ನು ಕೊಳ್ಳದೆ ಬಿಡೆನು" ಎಂದು ಗದರುತ್ತಾ ರುಕ್ಮಿಯು ಬಾಣವನ್ನು ಪ್ರಯೋಗಿಸಿದನು. ಇನ್ನು ಸುಮ್ಮನಿರುವುದು ತರವಲ್ಲವೆಂದು ಭಾವಿಸಿ ಕೃಷ್ಣನು "ನೀನು ನನಗೆ ಭಾವನಲ್ಲವೇ? ನೀನೇ ಸದ್ಭಾವನೆಯಿಂದ ಬಂದರೆ ನಿನಗೆ ನಮಸ್ಕರಿಸುವುದರಲ್ಲೇನೂ ತಪ್ಪಿಲ್ಲ. ಆದರೆ ನಿನಗೆ ಈ

ವಿಡಂಬನವೇಕೋ ನಾಸರಿಯೆ'' ಎಂದು ನುಡಿಯುತ್ತ ಕೃಷ್ಣನು ಬಾಣ ಪ್ರಯೋಗವಮಾಡಿ ಅವನ ಬಿಲ್ಲು ಬಾಣಗಳನ್ನು ನುಚ್ಚುನೂರಾಗಿ ಕತ್ತರಿಸಿದನು. ರುಕ್ಮಿಯಃ ಕತ್ತಿಯೂ ನುಚ್ಚುನೂರಾಗಿ ನಭಕ್ಕೆ ಸಿಡಿಯಿತು. ಇವರ ಕಾಳಗವನ್ನ ನೋಡುತ್ತಿದ್ದ ಅಮರರು ಜಯಕಾರ ಮಾಡಿದರು, ಆಗ ರುಕ್ಮಿಯು ಸಿಟ್ಟಿನಿಂದ ಔಡು ಕಚ್ಚುತ್ತಾ ಮಲ್ಲಯುದ್ಧಕ್ಕೆ ಸಿದ್ಧನಾದನು ಕೃಷ್ಣನು ಹಸಿದ ಸಿಂಹದಂತೆ ಸಿಟ್ಟಾಗಿ "ಎಲವೊ ಕುಲಗೆಡುಕ, ಬಂಧು ದ್ರೋಹಿ ! ನೀನು ನನ್ನ ಮೇಲೆ ಕಾಳಗಕ್ಕೆ ನಿಲ್ಲುವೆಯಾ? ಹಸುವು ಸೊಕ್ಕಿ ಸಿಂಹವನ್ನು ಕೆಣಕೀತೇ ? ಬಾ'' ಎನ್ನುತ್ತಾ ಅವನ ಮುಂದಲೆಯನ್ನು ಹಿಡಿದೆಳೆದು ನೆಲಕ್ಕೆ ಕೆಡವಿ ಅವನ ಕೊರಳಿಗೆ ಕತ್ತಿಯನ್ನು ಬೀಸುವ ಪ್ರಯತ್ನದಲ್ಲಿದ್ದಾಗ ರುಕ್ಮಿಣಿಯು ಕಂಡು ಹೆದರಿಕೆಯಿಂದ ನಡುಗಿದಳು ಅವಳು ಅಣ್ಣನ ಜೀವಕ್ಕೆ ಕಳವಳಿಸಿ "ದೇವ ! ಭಾವವನ್ನು ರಕ್ಷಿಸು. ಈ ಮಾಯಾ ಮೋಹಿತಾತ್ಮನನ್ನು ಕೊಲ್ಲುವೆಯಾ ? ಅಣ್ಣನ ಜೀವದಾನವನ್ನು ಕೊಡಬೇಕು." ಎಂದು ಹೇಳುತ್ತಾ ಕೃಷ್ಣನ ಪಾದ ಕಮಲಗಳಿಗೆ ನಮಸ್ಕರಿಸಿ ಕಣ್ಣೀರು ಕರೆಯಲು ಕೃಷ್ಣನು ಅವಳನ್ನು ಮಂದಹಾಸದಿಂದ ಆದರಿಸಿ ಅವಳ ಕಣ್ಣೀರನ್ನು ಒರಸಿ ಸಮಾಧಾನ ಪಡಿಸಿದನು.

ಅಂಗನೆಗೆ ಅಭಯವನ್ನು ಕೊಟ್ಟು ಅವಳ ಅಣ್ಣನ ಜೀವವನ್ನುಳಿಸಿ ಅವನಿಗೆ ಹೆಡೆಮುರಿ ಕಟ್ಟಿ ಆ ಮುನಿವಂದಿತನು ಅವನ ಮುಡಿಯ ಕೂದಲನ್ನು ಅಸಿಧಾರೆಯಿಂದ ತೆಗೆದುಹಾಕಿ ರುಕ್ಮಿಣಿಯೊಡನೆ ರಥವೇರಿ ಹೊರಟುಬಿಟ್ಟನು.

ಕೃಷ್ಣನು ಅತ್ತ ಹೋಗುತ್ತಲೂ ಬಲದೇವನು ತನ್ನ ಮೇಲೆ ಬಿದ್ದ ರಾಯರ ಸಮೂಹವನ್ನು ಗೆದ್ದು ಯಾದವ ವೃಂದದೊಡನೆ ಆ ಮಾರ್ಗವಾಗಿ ಬಂದು ರುಕ್ಮಿಯನ್ನು ಸಂಧಿಸಿದನು. ಕಂಬನಿಗಳಿಂದ ಕೂಡಿ ಕಂದಿದ ಮುಖಕಾಂತಿಯಿಂದ ನಿಂತಿದ್ದ ರುಕ್ಮಿಯನ್ನು ಕಂಡು ಆತನ ಹೆಡಮುರಿಗೆಯನ್ನು ಬಿಚ್ಚಿ "ಆಯ್ಯೋ, ಪಾಪ ಕೃಷ್ಣನು ಎಂಥ ಅನ್ಯಾಯ ಮಾಡಿದನು!'' ಎಂದು ಹಾಸ್ಯದಿಂದ ನುಡಿದು, ಮತ್ತಿಷ್ಟು ತಲೆ ತಗ್ಗಿಸಿದ ರುಕ್ಮಿಯನ್ನು ಕುರಿತು "ಅಯ್ಯೊ ಉಮ್ಮಳಿಸಬೇಡ. ನೀನು ಹಿಂದೆ ಮಾಡಿದ ದುಷ್ಕರ್ಮದ ಫಲವಾಗಿ ದುಃಖ, ಸತ್ಕರ್ಮದ ಫಲವಾಗಿ ಸೌಖ್ಯ ದೊರೆಯುತ್ತದೆ. ಇದು

ಜೀವರಿಗೆ ವಿಧಿ, ವೃಥಾ ನಮ್ಮ ಮೇಲೆ ಕೋಪವನ್ನು ವಹಿಸಬೇಡ'' ಎಂದು ಮೊದಲಾಗಿ ಹಲವು ರೀತಿಯಿಂದ ರುಕ್ಮಿಗೆ ತತ್ವ ಜ್ಞಾನವನ್ನು ಬೋಧಿಸಿ ಕಳುಹಿಸಿದನು. ರುಕ್ಮಿಯು ಮಹಾ ದುಗುಡದಿಂದ ಹೊರಟು ಕುಂಡಿನೀ ಪಟ್ಟಣವನ್ನು ಪ್ರವೇಶಿಸದೆ ಭೋಜಕಟಕವೆಂಬ ಬೇರೊಂದು ಪಟ್ಟಣವನ್ನು ಕಟ್ಟಿ ಅಲ್ಲಿ ನೆಲೆಸಿದನು. ತಂಗಿಯನ್ನೂ ತಾರದೆ, ಪುಂಡರೀಕಾಕ್ಷನನ್ನೂ ಕೊಲ್ಲದೆ ಕುಂಡಿನೀ ಪಟ್ಟಣಕ್ಕೆ ಹಿಂತಿರುಗೆನೆಂಬ ಅವನ ಪ್ರತಿಜ್ಞೆಯು ಹೀಗೆ ಪರಿಣಮಿಸಿತು.

ಇತ್ತ ಅಸುರಾಂತಕನು ರಾಯರ ಮೊತ್ತವನ್ನು ಅವಮಾನಕ್ಕೆ ಗುರಿ ಮಾಡಿ ಕಮಲಲೋಚನೆಯಾದ ರುಕ್ಮಿಣಿಯ ಸಮೇತ ನರ್ಮದೆಯನ್ನು ದಾಟಿ ಬಲರಾಮನನ್ನೂ ಯಾದವರನ್ನೂ ಜತೆಯಲ್ಲಿ ಕರೆದುಕೊಂಡು ಬಹಳ ಉತ್ಸವ ದಿಂದ ದ್ವಾರಕಾ ಪಟ್ಟಣವನ್ನು ಪ್ರವೇಶಿಸಿದನು. ಕೃಷ್ಣನ ಆಗಮನದ ಸುದ್ದಿಯನ್ನು ಕೇಳಿ ವಸುದೇವನೇ ಮೊದಲಾದ ವಂಶದ ಹಿರಿಯರು ಪುರ ಪ್ರಮುಖರನ್ನು ಜತೆಯಲ್ಲಿ ಕರೆದುಕೊಂಡು ಬಂದು ಕೃಷ್ಣನನ್ನು ಎದುರು ಗೊಂಡರು. ಮಂಗಳವಾದ್ಯ ಘೋಷ ರಾಜಮರ್ಯಾದೆಗಳೊಡನೆ ರುಕ್ಮಿಣೀ ಸಮೇತನಾದ ಕೃಷ್ಣನು ಮದುಮಗನ ಹಾಗೆ ನಗರ ಪ್ರವೇಶ ಮಾಡಿದನು. ತರುವಾಯ ವಸುದೇವನು ವಿದರ್ಭೇಶ್ವರನನ್ನೂ ಕಾಂಭೋಜ ಕಾಶೀರಾಜರುಗಳನ್ನೂ ಇತರ ರಾಜ ಸಮೂಹವನ್ನೂ ಕೃಷ್ಣನ ಮದುವೆಗೆ ಕರೆಯಿಸಿದನು. ಸಾಕ್ಷಾತ್ ವಿಶ್ವಂಭರನೇ ವರ. ಲಕ್ಷ್ಮಿಯೇ ವಧು. ದಿಬ್ಬಣಿಗರು "ವಿರಿಂಚಿ ಭವೇಂದ್ರ ಮುಖ್ಯಾಮರರು ಭೂವರರು"! ಆ ಮದುವೆಯ ವೈಭವವನ್ನು ಯಾರು ವರ್ಣಿಸಬಹುದು? ದ್ವಾರಕೆಯ ಪುರಜನರ ಸಂತೋಷ ಬಣ್ಣನೆಗೆ ನಿಲುಕದುದು. ಪರಮ ಋಷಿಗಳೇ ಬಂದು ಕೃಷ್ಣ ರುಕ್ಮಿಣಿಯರ ವಿವಾಹ ವಿಧಾನವನ್ನು ಸಾಂಗೋಪಾಂಗವಾಗಿ ನಡೆಸಿದರು. ವಸುದೇವನು ಮಹಾ ಸಂತೋಷದಿಂದ ಎಲ್ಲ ಅತಿಥಿ ಅಭ್ಯಾಗತರನ್ನೂ ಉಪಚರಿಸಿದನು. ಮದುವೆ ಬಹಳ ವೈಭವದಿಂದ ನಡೆಯಿತು. ಅನೇಕ ಬ್ರಾಹ್ಮಣರು ತೃಪ್ತರಾ ದರು. ಹಲವರಿಗೆ ಮಣಿ ಕನಕಭೂಷಣ ವಸನ ಗೋ ಭೂಮಿದಾನಗಳು ದೊರೆತವು. ರುಕ್ಮಿಣಿಯ ಮದುವೆಯಲ್ಲಿ ಲೋಕವೇ ಸಂತೋಷ ಪಟ್ಟಿತು.

# ಪೌಂಡ್ರಕ ವಾಸುದೇವ

ರುಕ್ಮಿಣಿಯನ್ನು ಮದುವೆಯಾದಮೇಲೆ ಶ್ರೀ ಕೃಷ್ಣನು ಹಲವು ಕಾಲ ಯಾದವರೊಡನೆ ದ್ವಾರಕೆಯಲ್ಲಿ ಸುಖವಾಗಿದ್ದನು. ಸಮಸ್ತ ಕ್ಷತ್ರಿಯರೂ ಕೃಷ್ಣನ ಶೌರ್ಯ ಪರಾಕ್ರಮಗಳನ್ನು ಗಮನಿಸಿ ಅವನನ್ನು ಗೌರವಿಸುತ್ತಿದ್ದರು. ಹೀಗಿರಲು ಒಂದು ದಿನ ಒಬ್ಬ ದೂತನು ದ್ವಾರಕೆಗೆ ಬಂದು ಯಾದವರ ಮಹಾಸಭೆಯಲ್ಲಿದ್ದ ಕೃಷ್ಣನ ಸನ್ನಿಧಿಯನ್ನು ಸೇರಿ ಏನೋ ವಿಜ್ಞಾಪಿಸಲು ಹೊರಟು ನಡುವೆ ಅಂಜಿಕೆಯಿಂದ ಪಕ್ಕಕ್ಕೆ ಸಾರಿದನು. ಆಗ ಕೃಷ್ಣನು ಅವನ ಮನೋದಯವನ್ನು ಗ್ರಹಿಸಿ "ನೀನಾರು? ಯಾರ ಭೃತ್ಯನು? ಯಾರು ನಿನ್ನನ್ನು ಕಳುಹಿಸಿದರು? ನಿಶ್ಶಂಕೆಯಿಂದ ಹೇಳು" ಎಂದು ಅಭಯ ನೀಡಲು ಆಗ ಅವನು ಕಾಶಿ ಮಹಾರಾಜನಾದ ಪೌಂಡ್ರಕನೆಂಬ ಮಹಾವೀರನ ದೂತನೆಂದೂ ಅವನ ಆಜ್ಞಾನುಸಾರ ಬಂದುದಾಗಿಯೂ ಹೇಳಿ ಪೌಂಡ್ರಕನ ಸಂದೇಶವನ್ನು ಹೀಗೆ ತಿಳಿಸಿದನು. "ವಾಸುದೇವನೆಂಬ ಶೂರನು ನಾನೊಬ್ಬನೇ, ವಾಸುದೇವನೆಂಬ ಹೆಸರು ನಿನಗೆ ಎಲ್ಲಿಯದು? ನಿನಗೆ ಪಶುಪಾಲನೆಯೇ ಹೊರತು ರಾಜಾಸನವು ಎಲ್ಲಿ ದೊರೆಯಬೇಕು? ಅರಿಯದವರು ನೀನು ಶ್ರೇಷ್ಠನಾದ ದೇವರೆಂದೂ, ಧರೆಗೆ ಅವತರಿಸಿರುವ ವಿಷ್ಣುವೇ ಎಂದೂ ಕೊಂಡಾಡಿದರೆ ನೀನು ಅಹಂಕಾರ ಪಟ್ಟಿದ್ದೀಯೆ. ಜಗದ ಅಧಿದೈವ ನಾನು. ಭೂಭಾರವನ್ನು ಕಳೆಯಲು ಹುಟ್ಟಿದ್ದೇನೆ. ಆದ್ದರಿಂದ ವಾಸುದೇವನೆಂಬ ಹೆಸರನ್ನು ಬಿಟ್ಟು ಬಿಡು. ಇಲ್ಲವಾದರೆ ಯುದ್ಧಕ್ಕೆ ಬಾ. ಯುದ್ಧಮಾಡಲಾರೆಯಾದರೆ ಶರಣಾಗತನಾಗು. ನನ್ನ ಚಿಹ್ನೆಯಾದ ಚಕ್ರ, ಗದೆ, ಶಾರ್ಙ್ಗ, ಪಾಂಚಜನ್ಯ ಮುಂತಾದ ನನ್ನ ಚಿಹ್ನೆಗಳನ್ನು ನೀನೇಕೆ ಧರಿಸಿರುವೆ? ಕಕ್ಕುಲಿತೆ ಇಲ್ಲದೆ ಎಲ್ಲವನ್ನೂ ಬಿಟ್ಟು ನನ್ನ ಪಾದಾರವಿಂದಗಳಿಗೆ ಶರಣಾಗತನಾಗು. ಇಲ್ಲದಿದ್ದರೆ ನೀನು ಬದುಕುವುದು ಹುಸಿ". ದೂತನ ಈ ಮಾತುಗಳನ್ನು ಕೇಳಿ ಆ ಸಭೆಯಲ್ಲಿದ್ದವರೆಲ್ಲಾ ಗೊಳ್ಳೆಂದು ನಕ್ಕರು. ಆ ನಗುವಿನ ಭರದಲ್ಲಿ ಅನೇಕರ ಬಾಯಿಂದ ತಂಬುಲಗಳು ಸಿಡಿದುವು. ಅಸುರಾಂತಕನಾದ ಶ್ರೀ ಕೃಷ್ಣನು ಮಂದಹಾಸದಿಂದ ಆ ದೂತನ ಮಾತುಗಳನ್ನು ಮತ್ತೊಮ್ಮೆ ಕೇಳಿ ಕೊನೆಗೆ ಹೀಗೆ ಉತ್ತರ

ಕೊಟ್ಟನು "ಈಗಲೇ ಯುದ್ಧಕ್ಕೆ ಬರುತ್ತಿದ್ದೇನೆ. ನಿನ್ನೊಡೆಯನಿಗೆ ತಿಳಿಸು. ನನ್ನ ಸಹಜ ಶಕ್ತಿಯನ್ನು ಅರಿತವರಿಲ್ಲ." ಎಂದು ಹೇಳಿ ರಥವನ್ನು ಸಿದ್ಧ ಪಡಿಸುವಂತೆ ದಾರುಕನಿಗೆ ಆಜ್ಞಾಪಿಸಿದನು. ಕೂಡಲೇ ಸೈನ್ಯಸಮೇತನಾಗಿ ಕೃಷ್ಣನು ರಥಾರೂಢನಾಗಿ ಯುದ್ಧಕ್ಕೆ ಹೊರಟನು. ಯಾದವ ಮಹಾ ಭಟರು ಶಸ್ತ್ರಾಸ್ತ್ರಗಳನ್ನು ಹಿಡಿದು ವಾರಣಾಸಿಗೆ ಹೊರಟರು. ಪಟ್ಟಣದ ಹೊರಭಾಗದಲ್ಲಿ ಬೀಡು ಬಿಟ್ಟು ಕೃಷ್ಣನು ತನ್ನ ಶಂಖವನ್ನು ಊದಿ "ಆ ಮಹಾ ವಿಷ್ಣುವನ್ನು ಕರೆ ನೋಡೋಣ" ಎಂದು ದೂತರನ್ನು ಅಟ್ಟಲು ಅವರು ಹೋಗಿ ಪೌಂಡ್ರಕನನ್ನು ಯುದ್ಧಕ್ಕೆ ಆತುರಪಡಿಸಿದರು. ಪೌಂಡ್ರಕನು ಖಡ್ಗಶರ ಶೂಲಾದಿಗಳನ್ನು ಧರಿಸಿ ಬಹಳ ಬಿಂಕದಿಂದ ಯುದ್ಧಕ್ಕೆ ಬಂದನು. ಕೃತ್ರಿಮವಾದ ಒಂದು ಗರುಡನ ಪುತ್ಥಳಿಯನ್ನು ಏರಿ ಹೊಗಳು ಭಟ್ಟರ ಕೈಯಲ್ಲಿ ಹೊಗಳಿಸಿಕೊಳ್ಳುತ್ತಾ ಬರುವ ಆ ರಾಜಾಧಮನನ್ನು ನೋಡಿ ಗಹಗಹಿಸಿ ನಗುತ್ತಾ ಕೃಷ್ಣನು ತನ್ನ ಸೈನ್ಯಕ್ಕೆ ಕೈ ಬೀಸಿದನು. ಮೇಘಗಳು ಗುಡುಗುತ್ತಾ ರವಿತಾರಾಗ್ರಹಾವಳಿ ಗಳನ್ನು ಮುಚ್ಚುವ ಹಾಗೆ ಪೌಂಡ್ರಕನ ರಾಜಭಟ ಸಮೂಹವು ಖಡ್ಗ ಪರಿಘ ಪಟ್ಟಸಾದಿಗಳನ್ನು ಹಿಡಿದು ಗುಂಪು ಗುಂಪಾಗಿ ನುಗ್ಗಿ ಕೃಷ್ಣನ ಕಡೆಯವರನ್ನು ಮುಸುಕಿದರು. ಆದರೆ ಯದುಪ್ರವೀರರು ಇವನ ವೇಷ ವನ್ನು ನೋಡಿ ಇವನೇನು ನಟ್ಟುವಿಗನೋ ನೃಪನೋ ಎಂದು ನಗುತ್ತ, ತಮ್ಮ ಸೈನ್ಯಕ್ಕೆ ಕೈಬೀಸಲು ಅವರು ಪರ ಸೈನ್ಯವನ್ನು ಭೇದಿಸಿ ಪೌಂಡ್ರಕನ ಎಡಬಲಗಳಿಗೆ ನುಗ್ಗಿದರು. ಕೃಷ್ಣನು ಆಗ "ಇದು ಆಟಗಾರನ ಪಡೆ. ನಿಮ್ಮ ಆಟ ಚನ್ನಾಗಿದೆ. ಆದರೆ ಈ ಆಟ ನಿಮಗೆ ಕಾಲನ ನೋಟ" ಎಂದು ಹೇಳುತ್ತ ತನ್ನ ಬಾಣ ಸಮೂಹದಿಂದ ಪರಬಲವನ್ನು ನೋಯಿಸಿದನು. ಆಗ ಪೌಂಡ್ರಕನ ಸೈನಿಕರು ಬಾಣದ ಪೆಟ್ಟಿಗೆ ನೊಂದು, ಗಾಬರಿಯಾಗಿ ಯುದ್ಧಭೂಮಿಯನ್ನು ಬಿಟ್ಟು ಓಡಿದರು. ಆಗ ಕೃಷ್ಣನು ಆ ನಿಮ್ಮ ವಿಷ್ಣು ವನ್ನು ತೋರಿಸಿ. ನಿಮಗೇಕೆ ಈ ಹೊಡೆದಾಟ ? ನಿಮ್ಮ ಅರಸನು ನಮಗೆ ದರ್ಶನ ಕೊಡಲಿ. ನಮ್ಮ ಬಾಣದ ಪೂಜೆಯನ್ನು ಕೈಗೊಳ್ಳಲಿ" ಎಂದು ಹೇಳುತ್ತ ಪೌಂಡ್ರಕನ ಸಮುಖಕ್ಕೆ ನುಗ್ಗಿ ಅವನ ರಥ ಕುದುರೆ ಮುಂತಾ ದುವನ್ನೆಲ್ಲ ಕತ್ತರಿಸಿಹಾಕಿ ತನ್ನ ಚಕ್ರಾಯುಧದಿಂದ ಪೌಂಡ್ರಕನ ತಲೆಯನ್ನು

ಛೇದಿಸಿದನು. ಪೌಂಡ್ರಕ ವಧೆಯಾದಮೇಲೆ ಕೃಷ್ಣನು ತನ್ನ ಸೈನ್ಯದೊಡನೆ ದ್ವಾರಕಾಪುರವನ್ನು ಪ್ರವೇಶಿಸುವಾಗ ಅಮರರು ಜಯಘೋಷ ಮಾಡುತ್ತಾ ಪುಷ್ಪವೃಷ್ಟಿಯನ್ನು ಕರೆದರು.

## ಸ್ಯಮಂತಕ

ದ್ವಾರಕಾಪಟ್ಟಣದ ಸತ್ರಾಜಿತನು ಸೂರ್ಯನನ್ನು ಭಕ್ತಿಯಿಂದ ಭಜಿಸಿ ಅವನು ಅನುಗ್ರಹಿಸಿಕೊಟ್ಟ ಸ್ಯಮಂತಕ ರತ್ನವನ್ನು ಕತ್ತಿನಲ್ಲಿ ಧರಿಸಿ ಕೊಂಡು ತನ್ನ ಪಟ್ಟಣಕ್ಕೆ ಹಿಂತಿರುಗಿದನು. ಅವನು ಬರುತ್ತಿದ್ದುದನ್ನು ನೋಡಿ ದ್ವಾರಕಾನಿವಾಸಿಗಳು ಬೆರಗಾಗಿ ಬಂದು ಕೃಷ್ಣನಿಗೆ ಹೀಗೆ ವಿಜ್ಞಾಪಿ ಸಿದರು. " ಸ್ವಾಮಿ, ತಮ್ಮ ಚರಣ ಕಮಲ ದರ್ಶನಾಪೇಕ್ಷೆಯಿಂದ ಭಗ ವಾನ್ ಸೂರ್ಯನಾರಾಯಣನು ಬರುತ್ತಿದ್ದಾನೆ. ನೋಡುವವರ ಕಣ್ಣುಗಳು ಕೋರೈಸಿ ಹೋಗುತ್ತಿವೆ. ತಾವು ಕೃಪೆಮಾಡಿ ರಕ್ಷಿಸಬೇಕು " ಪುರಜನರ ಈ ಮಾತನ್ನು ಕೇಳಿ ಕೃಷ್ಣನು ಅವರಿಗೆ ಧೈರ್ಯ ಹೇಳುತ್ತ, " ಸೂರ್ಯನಲ್ಲ. ನೀವು ಹೆದರಬೇಡಿ. ಗುಲಗಂಜಿಯನ್ನು ನೋಡಿ ಮಾಣಿಕ್ಯವೆಂದು ಭ್ರಾಂತಿ ಪಡಬೇಡಿ. ಬರುತ್ತಿರುವವನು ಸತ್ರಾಜಿತ, ಸೂರ್ಯನಲ್ಲ. ಸೂರ್ಯನ ಅನು ಗ್ರಹದಿಂದ ಲಭಿಸಿದ ರತ್ನವನ್ನು ಧರಿಸಿಕೊಂಡು ಬರುತ್ತಿದ್ದಾನೆ." ಎಂದು ನುಡಿದನು. ಹೀಗೆ ಕೃಷ್ಣನು ಮಾತನಾಡುತ್ತಿರುವಾಗಲೇ ಮಣಿಧರನಾದ ಸತ್ರಾಜಿತನು ತನ್ನ ಮನೆಯನ್ನು ಪ್ರವೇಶಿಸಿದನು. ಆ ರತ್ನವು ಪ್ರತಿದಿನವೂ ಎಂಟು ಮಣದಷ್ಟು ಚಿನ್ನವನ್ನು ಕೊಡುತ್ತಿತ್ತು. ಸತ್ರಾಜಿತನು ಆ ರತ್ನ ವನ್ನು ಪೂಜಿಸುತ್ತಾ ಸಿರಿವಂತನಾಗಿ ಸುಖದಿಂದಿದ್ದನು. ಆ ರತ್ನ ಸಾನ್ನಿಧ್ಯದ ಮಹಿಮೆಯಿಂದ ದ್ವಾರಕಿಯಲ್ಲಿ ಆಧಿ ವ್ಯಾಧಿ ದುರ್ಭಿಕ್ಷಾದಿಗಳ ಭಯವಿಲ್ಲದೆ ಇತ್ತು.

ಹೀಗಿರುವಾಗ ಒಂದು ದಿನ ಕೃಷ್ಣನು ಸತ್ರಾಜಿತನನ್ನು ಅರಮನೆಗೆ ಕರೆಸಿ ಆ ರತ್ನವನ್ನು ಯದುಮಹಾರಾಜನಿಗೆ ಕೊಡಬೇಕೆಂದು ಕೇಳಿದನು. ಆದರೆ ಧನ ಲೋಭಿಯಾದ ಸತ್ರಾಜಿತನು ಮುಕುಂದನ ಆಜ್ಞೆಯನ್ನು ಲಕ್ಷಿಸದೆ ಆ ರತ್ನವನ್ನು ತನ್ನ ಮನೆಯಲ್ಲಿಯೇ ಇಟ್ಟುಕೊಂಡು ಪೂಜಿಸುತ್ತಿದ್ದನು. ಹೀಗಿರುವಾಗ ಒಂದು ದಿನ ಸತ್ರಾಜಿತನ ತಮ್ಮನಾದ ಪ್ರಸೇನನು ಆ ಮಣಿ

ಯನ್ನು ಕತ್ತಿನಲ್ಲಿ ಧರಿಸಿ ಬೇಟೆಗೆ ಹೋದನು. ಕಾಡಿನಲ್ಲಿ ಮೃಗಯಾವಿನೋದದಲ್ಲಿದ್ದಾಗ ಒಂದು ಸಿಂಹ ಬಂದು ಆ ರತ್ನದ ಪ್ರಕಾಶಕ್ಕೆ ಸಿಟ್ಟುಗೊಂಡು ಅವನನ್ನು ಕೊಂದಿತು. ಜಾಂಬವನು ಆ ಸಿಂಹವನ್ನು ಕೊಂದು ಆ ಮಣಿ ಸಮೇತನಾಗಿ ತನ್ನ ಮಹಾಬಿಲವನ್ನು ಪ್ರವೇಶಮಾಡಿಬಿಟ್ಟನು.

ಬೇಟೆಗೆ ಹೋದ ಪ್ರಸೇನನು ಎಷ್ಟು ಹೊತ್ತಾದರೂ ಹಿಂತಿರುಗದಿರಲು ಸತ್ರಾಜಿತನೇ ಮೊದಲಾದವರು ಅವನನ್ನು ಹುಡುಕುತ್ತ ಅಡವಿಯಲ್ಲೆಲ್ಲಾ ಅಲೆದು ಪ್ರಸೇನನ ಶವವನ್ನು ಕಂಡರು. ಅವನ ಶವದ ಮೇಲೆ ಮಣಿ ಇಲ್ಲದಿರಲು ಕೃಷ್ಣನು ಮಣಿಯ ಆಸೆಯಿಂದ ತನ್ನ ತಮ್ಮನನ್ನು ಕೊಂದಿರಬೇಕೆಂದು ಸತ್ರಾಜಿತನು ಅನುಮಾನಿಸಿಪನು. ಹೀಗೆ ಕೃಷ್ಣನಿಗೆ ವೃಥಾ ಅಪವಾದಬಂದಿತು. ಪ್ರಸೇನನ ಮರಣದ ಸುದ್ದಿಯನ್ನೂ ಸತ್ರಾಜಿತನ ಸಂದೇಹವನ್ನೂ ಕೇಳಿ ಕೃಷ್ಣನು ಈ ವೃಥಾ ಅಪವಾದವನ್ನು ಕಳೆದುಕೊಳ್ಳಬೇಕೆಂದು ಮಣಿಯನ್ನು ಹುಡುಕುವುದಕ್ಕಾಗಿ ಹೊರಟನು. ಅಡವಿಯಲ್ಲೆಲ್ಲಾ ಸಂಚಾರಮಾಡಿ ಕೃಷ್ಣನು ಪ್ರಸೇನನ ಮರಣ ಸಿಂಹದಿಂದ ಆಯಿತೆಂದು ಅರಿತುಕೊಂಡು ಹೆಜ್ಜೆಯ ಗುರುತು ಹಿಡಿದು ಬೆಂಬತ್ತಿ, ಕಾಡಿನ ಮಧ್ಯದಲ್ಲಿ ಸಿಂಹವು ಸತ್ತು ಬಿದ್ದಿದ್ದುದನ್ನು ನೋಡಿ ಅಲ್ಲಿ ಕರಡಿಯ ಉಗುರಿನ ಗಾಯದ ಗುರುತನ್ನು ಕಂಡು ಆಶ್ಚರ್ಯಪಟ್ಟನು. ಸಿಂಹವನ್ನು ಕೊಲ್ಲುವಂಥ ಕರಡಿ ಇನ್ನೆಂಥ ವಿಕ್ರಮಶಾಲಿ ಇರಬೇಕು ಎಂದು ಯೋಚಿಸುತ್ತಾ ಕೃಷ್ಣನು ಅದರ ಗುರುತುಗಳನ್ನೇ ನೋಡುತ್ತ ಜಾಂಬವನ ಮಹಾಬಿಲವನ್ನು ಪ್ರವೇಶಿಸಿದನು ತಾಪತ್ರಯ ವಿದೂರನಾದ ಕೃಷ್ಣನು ಅಪವಾದ ಶಿಖಿಯಲ್ಲಿ ಬೆಂದು ಬಿಲವನ್ನು ಹೊಗುವುದಕ್ಕೂ ಹಿಂತೆಗೆಯಲಿಲ್ಲ. ತನ್ನ ಪರಿವಾರದವರನ್ನೆಲ್ಲಾ ಬಿಲದ ಬಾಗಿಲಲ್ಲಿ ನಿಲ್ಲಿಸಿ ತಾನು ಒಳಹೊಕ್ಕನು. ಹನ್ನೆರಡು ದಿನ ಕಾದಿದ್ದು ಆ ಒಳಗಾಗಿ ತಾನು ಹಿಂತಿರುಗಿ ಬರದಿದ್ದರೆ ಅವರು ನಗರಕ್ಕೆ ಹೊರಟುಹೋಗಬೇಕೆಂದು ಹೇಳಿದ್ದನು. ಬಿಲದ ದಟ್ಟವಾದ ಕತ್ತಲೆಯಲ್ಲಿ ಕೃಷ್ಣನು ಮೆಲ್ಲಗೆ ಹೋಗಿ ಕಡೆಗೆ ಆ ಸ್ಯಮಂತಕ ರತ್ನವನ್ನು ಒಂದು ಮಗುವು ಕೈಲಿ ಹಿಡಿದು ಆಡುವುದನ್ನು ಕಂಡನು. ಕೃಷ್ಣನು ಆ ಮಗುವಿನ ಸಮೀಪದಲ್ಲಿ ನಿಂತು ನೋಡುತ್ತಿರಲು ಆ ಮಗುವಿನ ದಾದಿಯು ಯಾರೋ ಬಂದರೆಂದು ಕೂಗಿಕೊಳ್ಳಲು ಆ ಧ್ವನಿಯನ್ನು ಕೇಳಿ ಆ ಬಿಲದ

ಒಡೆಯನಾದ ಜಾಂಬವನು ಅಲ್ಲಿಗೆ ಬಹಳ ಸಿಟ್ಟಾಗಿಬಂದನು. ಬಂದವನಾರೆಂಬುದನ್ನರಿಯದೆ ಜಾಂಬವಂತನು ಕೃಷ್ಣನೊಡನೆ ಘೋರವಾದ ಯುದ್ಧವನ್ನೇ ಹೂಡಿದನು ಆದರೆ ಜಗದುದಯ ಕಾರಣನಾದ ಭಗವಂತನ ಮೇಲೆ ಯಾವ ಶಸ್ತ್ರಾಸ್ತ್ರಗಳು ತಾನೆ ಏನು ಮಾಡಿಯಾವು? ಆದರೆ ಜಾಂಬವನು ಹಾಗೆಲ್ಲ ಸೋಲುವ ಸ್ವಭಾವದವನಲ್ಲ. ವೃದ್ಧನಾದರೂ ಅವನು ಈ ಅಪರಿಚಿತನಾದ ವೀರನೊಡನೆ ಘೋರವಾದ ಮುಷ್ಟಿಯುದ್ಧವನ್ನು ಮಾಡಿದನು. ಹದಿನೆಂಟು ದಿನಗಳಕಾಲ ಕೃಷ್ಣ ಜಾಂಬವಂತರು ಯುದ್ಧಮಾಡಿದರು. ಕೊನೆಗೆ ಜಾಂಬವನ ಶಕ್ತಿಕುಂದಿತು. ಅವನು ಬಳಲಿ “ ಆರು ನೀನೆಲೆ ವೀರ, ನೀನೇನು ಕೌಸ್ತುಭಧಾರಿಯೋ? ಶಂಕರನೋ? ಅಥವಾ ವಾಯುದೇವನೋ? ಹೀಗೆ ನನ್ನೊಡನೆ ಯುದ್ಧಮಾಡುವವರು ಈ ಯುಗದಲ್ಲಿ ಯಾರು ಬರಬೇಕು? ಎಂದು ನುಡಿದು ಜಾಂಬವನು ಕೊಂಚಹೊತ್ತು ಧ್ಯಾನಮಗ್ನನಾದನು. ಆ ಸಮಯದಲ್ಲಿ ಹರಿ ಕರುಣಿಸಲು ಕೃಷ್ಣನೇ ರಘುನಾಥನೆಂಬುದನ್ನು ಕಂಡು ಜಾಂಬವನು ಪುಳಕಿತನಾಗಿ ಕೃಷ್ಣನಿಗೆ ನಮಸ್ಕಾರಮಾಡಿ “ನನಗೆ ಮರವೆಯನ್ನುಂಟುಮಾಡಿ ಇಷ್ಟು ದಿನ ನನ್ನೊಡನೆ ಕಾದಿದೆಯಲ್ಲಾ?” ಎಂದು ಪೇಚಾಡಿದನು. ಕೃಷ್ಣನು ಆ ಪರಮಭಕ್ತನನ್ನು ಹಿಡಿದೆತ್ತಿ ಆಲಂಗಿಸಿಕೊಂಡು ತಾನು ಬಂದ ವೃತ್ತಾಂತವನ್ನೆಲ್ಲ ಹೇಳಿದನು. ಒಂದು ರತ್ನದ ದೆಸೆಯಿಂದ ಕೃಷ್ಣನಿಗೆ ಅಪಕೀರ್ತಿಬಂದಿತೆಂದು ಕೇಳಿ ಜಾಂಬವಂತನು ಕೂಡಲೇ ಕೃಷ್ಣನಿಗೆ ಆ ಮಣಿಯನ್ನು ಕೊಟ್ಟದ್ದಲ್ಲದೆ, ಅತ್ಯಧಿಕ ರೂಪಗುಣ ಸಂಪನ್ನೆಯಾದ ಜಾಂಬವತಿ ಎಂಬ ತನ್ನ ಮಗಳನ್ನು ಅವನಿಗೆ ಕೊಟ್ಟು ಮದುವೆಮಾಡಿದನು.

ಇತ್ತ ಕೃಷ್ಣನು ಅವನು ಹೇಳಿದ ಅವಧಿಯಲ್ಲಿ ಬರದಿರಲು ಬಿಲದ ಬಾಗಿಲಲ್ಲಿ ಕಾದಿದ್ದ ಅವನ ಪರಿವಾರದವರು ದ್ವಾರಕಿಗೆ ಹೋಗಿ ವರ್ತಮಾನವನ್ನು ಕೊಟ್ಟರು ಕೃಷ್ಣನ ಮರಣವಾರ್ತೆಯನ್ನು ಕೇಳಿ ವಸುದೇವಾದಿಗಳು ಬೆಂಕಿಯಲ್ಲಿ ನಿಂತವರ ಹಾಗೆ ದುಃಖದಿಂದ ಮೂರ್ಛಿತರಾದರು. ತರುವಾಯ ಸಮಸ್ತ ಪುರಜನರೂ ದ್ವಾರಕಿಯ ಸಮೀಪದ ಪಾರ್ವತಿಯ ದೇವಾಲಯಕ್ಕೆ ಹೋಗಿ “ ತಾಯೆ, ಕರುಣಿಸು. ನಾರಾಯಣನ ಜೀವವನ್ನು ರಕ್ಷಿಸು, ಮಾಯೆ, ಭುವನಾಧಾರೆ, ನೀನಲ್ಲದೆ ನಮಗಿನ್ನಾರು ದಿಕ್ಕು?” ಎಂದು

ದೇವಿಗೆ ಮೊರೆಯಿಟ್ಟರು. ಹೀಗೆ ಎಲ್ಲರೂ ಪಾರ್ವತಿಯನ್ನು ದೈನ್ಯದಿಂದ ಪ್ರಾರ್ಥಿಸುತ್ತಿರುವಾಗಲೇ ಪ್ರಾರ್ಥನೆಯ ಫಲ ತಟ್ಟನೆ ಕಾಣುವ ಹಾಗೆ ಕೃಷ್ಣನು ಜಾಂಬವತೀ ಸಮೇತನಾಗಿ ರತ್ನವನ್ನು ತೆಗೆದುಕೊಂಡು ದ್ವಾರಕಾ ಪಟ್ಟಣಕ್ಕೆ ಬಂದನು. ಅದನ್ನು ದೂರದಿಂದಲೇ ನೋಡಿ ಪುರಜನರು ಬಹಳ ಸಡಗರದಿಂದ ಇದಿರು ನಡೆದು ಅವನನ್ನು ವೈಭವದಿಂದ ಸ್ವಾಗತಿಸಿದರು. ದ್ವಾರಕಿಯ ಪುರಜನಕ್ಕೆ ಹೋದ ಜೀವ ಮತ್ತೆ ಬಂದಹಾಗಾಯಿತು. ವಸು ದೇವಾದಿಗಳು ಓಡಿ ಬಂದು ಕೃಷ್ಣನನ್ನಪ್ಪಿ ಆನಂದಬಾಷ್ಪಗಳನ್ನು ಸುರಿಸಿ ದರು. ಅನಂತರ ಸಮಸ್ತ ಯಾದವರನ್ನೂ ಸಭೆ ಸೇರಿಸಿ ಸತ್ರಾಜಿತನನ್ನು ಕರೆಯಿಸಿ ಒಡ್ಡೋಲಗದ ಮಧ್ಯೆ ಆ ಸ್ಯಮಂತಕ ಮಣಿಯನ್ನು ಅವನಿಗೆ ಕೊಟ್ಟನು. ಆಗ ಸತ್ರಾಜಿತನಿಗೆ ಮನಸ್ಸಿನಲ್ಲಿ ಬಹಳ ವ್ಯಥೆಯಾಯಿತು. "ಕೃಷ್ಣನಮೇಲೆ ನಾನು ವೃಥಾ ಅಪವಾದವನ್ನು ಹೊರಿಸಿದೆನಲ್ಲಾ" ಎಂದು ಸಂಕಟಪಟ್ಟನು. ಲಜ್ಜೆಗೊಂಡು ಸತ್ರಾಜಿತನು ಆ ಮಣಿಯನ್ನು ತೆಗೆದು ಕೊಂಡು ತಲೆಬಗ್ಗಿಸಿಕೊಂಡು ಹೊರಟುಹೋದನು. ಕೆಲವು ದಿನಗಳಾದ ಮೇಲೆ ಸತ್ರಾಜಿತನು ಕೃಷ್ಣನಿಗೆ ತನ್ನ ಮಗಳಾದ ಸತ್ಯಭಾಮೆಯನ್ನು ಕೊಟ್ಟು ಮದುವೆಮಾಡುತ್ತಾ ಆ ಸಮಯದಲ್ಲಿ ಸ್ಯಮಂತಕವನ್ನು ಅವನಿಗೆ ಕೊಡಲು ಹೋದನು. ಆಗ ಕೃಷ್ಣನು ಸತ್ಯಭಾಮೆಯನ್ನು ಸ್ವೀಕರಿಸಿ ಸ್ಯಮಂತವನ್ನು ನಿರಾಕರಿಸಿ "ಸೂರ್ಯನು ಭಕ್ತನಾದ ನಿನಗೆ ಅನು ಗ್ರಹಿಸಿ ಕೊಟ್ಟಿರುವ ಈ ರತ್ನವು ನಿನ್ನಲ್ಲಿಯೇ ಇರಲಿ. ನನಗೆ ಬೇಡ" ಎಂದು ಹೇಳಿ ಅರಮನೆಗೆ ಹಿಂತಿರುಗಿದನು.

ಸತ್ಯಭಾಮಾ ಸಮೇತನಾಗಿ ಕೃಷ್ಣನು ಅರಮನೆಗೆ ಬರುವವೇಳೆಗೆ ಪಾಂಡವರು ಕೌರವರ ಮೋಸಕ್ಕೆ ಸಿಕ್ಕಿ ಅರಗಿನ ಮನೆಯಲ್ಲಿ ಬೆಂದು ಹೋದ ರೆಂಬ ವಾರ್ತೆ ಬಂತು. ತನ್ನ ಸೋದರತ್ತೆಯ ಮಕ್ಕಳ ವಿಪತ್ತಿನ ಸುದ್ದಿ ಯಿಂದ ಮನನೊಂದ ಕೃಷ್ಣನು ಅಣ್ಣನಾದ ಬಲರಾಮನೊಡನೆ ಕೂಡಲೆ ಹಸ್ತಿನಾವತಿಗೆ ಹೊರಟುಬಿಟ್ಟನು. ಅಲ್ಲಿ ಆಪ್ತರಾದವರನ್ನು ಕಂಡು ಮಾತ ನಾಡಿ ಏನೊಂದನ್ನೂ ನಿರ್ಣಯಿಸಲಾರದೆ ಪೇಚಾಡುತ್ತಿರುವಾಗ ದ್ರುಪದ ರಾಜನ ಕಡೆಯ ದೂತರು ಬಂದು ದ್ರೌಪದಿಯ ಸ್ವಯಂವರದ ಸುದ್ದಿಯನ್ನು ಹೇಳಿ ಅವನನ್ನು ಆಹ್ವಾನಿಸಿದರು. ದ್ರುಪದರಾಜನು ತನ್ನ ಮಗಳನ್ನು

ಅರ್ಜುನನಿಗೇ ಕೊಡಬೇಕೆಂದು ಸಂಕಲ್ಪಿಸಿದ್ದನು. ಅವನಿಗೆ ಪಾಂಡವರ ವಿನಾಶದ ವಾರ್ತೆ ಕೇಳಿ ಸಿಡಿಲು ಬಡಿದಂತೆ ಆಯಿತು. ವಿಧಿಯಿಲ್ಲದೆ ಅವನು ಈಗ ದ್ರೌಪದಿಗೆ ಸ್ವಯಂವರವನ್ನು ಏರ್ಪಡಿಸಿ ನಾಡಿನ ರಾಜರನ್ನೆಲ್ಲ ಕರೆಯ ಕಳುಹಿಸಿದ್ದನು. ದ್ರುಪದನ ಮನಸ್ಸಿನಲ್ಲಿ ಪಾಂಡವರು ಇನ್ನೂ ಉಳಿದಿರ ಬಹುದೆಂಬ ಒಂದು ದೂರದ ಆಸೆಯಿತ್ತು. ಹೀಗೆ ಸ್ವಯಂವರದ ಏರ್ಪಾ ಡಾದರೆ ಅವರೂ ಬರಬಹುದೇನೋ ಎಂಬ ಹಂಬಲ.

ಕೃಷ್ಣ ಬಲರಾಮರು ಪಾಂಚಾಲ ನಗರಕ್ಕೆ ಹೋಗಿ ಸ್ವಯಂವರ ಮಂಟಪದಲ್ಲಿದ್ದ ಭೀಮಾರ್ಜುನರನ್ನು ಗುರುತಿಸಿ ಆಮೇಲೆ ಅವರು ಇಳಿದಿದ್ದ ಕುಂಬಾರನ ಮನೆಗೆ ಹೋಗಿ ಧರ್ಮರಾಯನನ್ನೂ ಕುಂತೀದೇವಿಯನ್ನೂ ಕಂಡು ಮಾತನಾಡಿ ಧೈರ್ಯ ಹೇಳಿದರು. ಕುಂತಿಯು ಕೃಷ್ಣನ ಪ್ರೇಮಾಭಿ ಮಾನಗಳಿಗಾಗಿ ಬಹಳ ಅಭಿನಂದಿಸಿದಳು.

ಈ ವೇಳೆಗೆ ದ್ವಾರಕಿಯಲ್ಲಿ ಅನರ್ಥ ನಡೆದು ಹೋಗಿತ್ತು. ಸತ್ಯಭಾಮೆ ಯನ್ನು ತಾನು ಮದುವೆಯಾಗಬೇಕೆಂದು ಕಾದಿದ್ದ ಶತಧನ್ವನೆಂಬ ಯಾದವನು ಅವಳನ್ನು ಕೃಷ್ಣನಿಗೆ ಕೊಟ್ಟ ಸತ್ರಾಜಿತನ ಮೇಲೆ ಸಿಟ್ಟಾಗಿ "ನನಗೆ ಕೊಡುವೆ ನೆಂದು ವಾಗ್ದಾನ ಮಾಡಿ ಸತ್ಯಭಾಮೆಯನ್ನು ಬೇರೆಯವನಿಗೆ ಕೊಟ್ಟೆಯಾ?" ಎಂದು ಅವನನ್ನು ಹಂಗಿಸಿ ಕೊಂದು ಸ್ಯಮಂತಕ ರತ್ನವನ್ನು ತೆಗೆದುಕೊಂಡು ಹೊರಟುಬಿಟ್ಟನು. ಸತ್ಯಭಾಮೆಯು ಇದನ್ನರಿತು ಕೃಷ್ಣನನ್ನು ಹುಡುಕಿ ಕೊಂಡು ಹಸ್ತಿನಾವತಿಯನ್ನು ಸೇರುವವೇಳೆಗೆ ಪಾಂಚಾಲ ನಗರದಿಂದ ಕೃಷ್ಣನೂ ಅಲ್ಲಿಗೆ ಬಂದನು. ಹೆಂಡತಿಯು ಹೇಳಿದ ವಾರ್ತೆ ಕೇಳಿ ಅವನು ಅರಸರನ್ನು ಬೀಳ್ಕೊಂಡು ದ್ವಾರಕಿಗೆ ಹಿಂತಿರುಗಿದನು.

ಕೃಷ್ಣನು ತನ್ನನ್ನು ದಂಡಿಸುವ ಸಲುವಾಗಿಯೇ ಬರುತ್ತಿದ್ದಾನೆಂದು ಕೇಳಿ ಶತಧನ್ವನು ಅಂಜಿ ಸ್ಯಮಂತಕ ರತ್ನವನ್ನು ಅಕ್ರೂರನ ಕೈಲಿಕೊಟ್ಟು ಇನ್ನು ತಾನು ದ್ವಾರಕಿಯಲ್ಲಾಗಲಿ, ಆದೇಶದಲ್ಲಿಯೇ ಆಗಲಿ. ಇರಲಾಗ ದೆಂದು ನಿರ್ಧರಿಸಿ ಪಲಾಯನ ಮಾಡಿದನು. ಕೃಷ್ಣನು ಬೇಹುಗಾರರಿಂದ ಶತಧನ್ವನು ಹೋದ ದಾರಿಯನ್ನರಿತು ಅವನನ್ನು ಎಡೆ ಬಿಡದೆ ಬೆಂಬತ್ತಿ ಕೊನೆಗೆ ಅವನನ್ನು ಹಿಡಿದು ಹೊಡೆದು ಕೊಂದನು. ಆಮೇಲೆ ಹುಡುಕಿದರೆ ಅವನ ಬಳಿ ರತ್ನವಿರಲಿಲ್ಲ. ಅದನ್ನು ಪತ್ತೆ ಮಾಡುವ ಕೆಲಸವುಳಿಯಿತು.

ಸತ್ರಾಜಿತನ ಕೊಲೆಗಾರನನ್ನು ಕೊಂದದ್ದಾಯಿತೆಂದು ಸಮಾಧಾನ ಮಾಡಿಕೊಂಡು ಕೃಷ್ಣನು ಹಿಂತಿರುಗುತ್ತಿದ್ದಾಗ ಬಲರಾಮನು ನಡುದಾರಿಯಲ್ಲಿ ಬಂದು ಸೇರಿದನು. ಶತಧನ್ವನಲ್ಲಿ ಮಣಿ ಸಿಕ್ಕಲಿಲ್ಲವೆಂದು ಕೃಷ್ಣನು ಹೇಳಲು ಬಲರಾಮನು ನಂಬಲಿಲ್ಲ. ಕೃಷ್ಣನು ಸ್ವಾರ್ಥದಿಂದ ರತ್ನವನ್ನು ಮುಚ್ಚಿಟ್ಟುಕೊಂಡು ತನಗೆ ಸುಳ್ಳು ಹೇಳುತ್ತಿರುವನೆಂದೇ ತಿಳಿದನು. ಅವನಿಗೆ ಕೃಷ್ಣನ ಮೇಲೆ ಬಹಳ ಕೋಪವೇ ಬಂತು; ಅವನೊಡನೆ ದ್ವಾರಕಿಗೆ ಹೋಗಲು ಇಷ್ಟವಿಲ್ಲದೆ ಮಿಥಿಲಾಪಟ್ಟಣಕ್ಕೆ ಹೋಗಿ ಅಲ್ಲಿಯೇ ನಿಂತುಬಿಟ್ಟನು ಕೃಷ್ಣನಿಗೆ ನಿರ್ನಿಮಿತ್ತವಾಗಿ ಬಂಧು ವೈರ ಗಂಟುಬಿತ್ತು.

ಇತ್ತ ಶತಧನ್ವನ ಕೊಲೆಯು ಸುದ್ದಿಯನ್ನು ಕೇಳಿದ ಅಕ್ರೂರನು ಇನ್ನು ತಾನು ಮಣಿ ಸಹಿತನಾಗಿ ದ್ವಾರಕಿಯಲ್ಲಿಯೇ ಇದ್ದರೆ ಸತ್ರಾಜಿತನ ಕೊಲೆಗ ಸಹಾಯಮಾಡಿದ ಅಪಕೀರ್ತಿ ತನ್ನ ಮೇಲೆ ಹೊರಬಹುದೆಂದು ಹೆದರಿಕೊಂಡು ಕಾಶೀ ಪಟ್ಟಣಕ್ಕೆ ಹೊರಟು ಹೋದನು. ಕೃಷ್ಣನು ದ್ವಾರಕಿಗೆ ಹಿಂತಿರುಗಿದನಾದರೂ ಅವನ ಮನಸ್ಸಿಗೆ ಹಿತವಿಲ್ಲದಂತಾಯಿತು. ರತ್ನವೂ ಸಿಕ್ಕಲಿಲ್ಲ; ಅಣ್ಣನಿಗೆ ಅಸಮಾಧಾನವಾಯಿತು. ಇದರಿಂದ ಅವನು ವ್ಯಥಿತನಾಗಿಯೇ ಬೆಸರದಿಂದ ದಿನಗಳನ್ನು ತಳ್ಳುತ್ತಿರಲು ದ್ವಾರಕಿಯಲ್ಲಿ ಕ್ರೂರವಾದ ಕ್ಷಾಮವು ತಲೆದೋರಿತು. ಅಕ್ರೂರನೊಡನೆ ರತ್ನವೂ ಕಾಶೀಪಟ್ಟಣವನ್ನು ಸೇರಿದುದರಿಂದ ಅಲ್ಲಿ ಮಾತ್ರ ಸುಭಿಕ್ಷವಾಗಿತ್ತು. ಇದನ್ನೆಲ್ಲ ಗಮನಿಸಿ ಜಾಣನಾದ ಶ್ರೀ ಕೃಷ್ಣನು ಸ್ಯಮಂತಕ ರತ್ನವು ಅಕ್ರೂರನಲ್ಲಿಯೇ ಇರಬೇಕೆಂದು ಊಹಿಸಿ ತನ್ನ ಸ್ಥಿತಿಯನ್ನು ಅವನಿಗೆ ತಿಳಿಸಿ ಅವನನ್ನು ದ್ವಾರಕಿಗೆ ಕರೆಯಿಸಿದನು. ಸಭೆಯಲ್ಲಿ ಸಮಸ್ತ ಯಾದವ ವೀರರ ನಡುವೆ, ಬಲರಾಮನ ಇದಿರಿನಲ್ಲಿ ಅಕ್ರೂರನು ಸ್ಯಮಂತಕವು ತನ್ನ ಕೈಗೆ ಬಂದ ವೃತ್ತಾಂತವನ್ನು ವಿವರವಾಗಿ ಹೇಳಿ ಆ ರತ್ನವನ್ನು ಗೋವಿಂದನ ಚರಣಾರವಿಂದಗಳಲ್ಲಿ ಸಮರ್ಪಿಸಿದನು. ಇದರಿಂದ ಬಲರಾಮನ ಸಂಶಯ ಪರಿಹಾರವಾಯಿತು. ಕೃಷ್ಣನಿಗೆ ಬೇಕಾಗಿದ್ದುದೂ ಅಷ್ಟೇ! ಆದರೆ ಜಾಂಬವತಿ ಸತ್ಯಭಾಮೆಯರು ಆ ರತ್ನ ನನ್ನದೂ, ತನ್ನದು ಎಂದು ಜಗಳವಾಡಿದರು. ಸತ್ರಾಜಿತನು ಅಪುತ್ರಿಕನಾಗಿ ಸತ್ತದ್ದರಿಂದ ಅವನ ಸ್ವತ್ತಾದ ಆ ರತ್ನವು ಅರಸನಾದ ತನಗೇ ಸೇರಬೇಕೆಂದು ವಸುದೇವನು ಹೇಳಿದನು!

ಆದರೆ ಶ್ರೀ ಕೃಷ್ಣನು ಇದಾವುದನ್ನೂ ಗಮನಿಸದೆ, ಇಷ್ಟೆಲ್ಲ ಅನರ್ಥಕ್ಕೆ ಕಾರಣವಾದ ಆ ರತ್ನವು ತನಗೆ ಬೇಡವೆಂದು ಮನದಲ್ಲಿ ನಿರ್ಣಯಿಸಿ ಕೊಂಡು " ಅಯ್ಯಾ, ನನಗೆ ಬಂದ ಅಪವಾದವನ್ನು ಕಳೆದುಕೊಳ್ಳುವುದ ಕ್ಕಾಗಿ ನಿನಗೆ ಹೇಳಿಕಳುಹಿಸಿದೆನು. ಅಷ್ಟೇ ಹೊರತು ನನಗೆ ಈ ರತ್ನದಲ್ಲಿ ಎಷ್ಟು ಮಾತ್ರವೂ ಆಸೆಯಿಲ್ಲ. ಇದನ್ನು ನೀನೇ ತೆಗೆದುಕೊಳ್ಳಬೇಕು." ಎಂದು ಹೇಳಿ ಅದನ್ನು ಅಕ್ರೂರನಿಗೇ ಕೊಟ್ಟು ಕಳುಹಿಸಿಬಿಟ್ಟನು. ಪರಾತ್ಪರ ನಾದ ಪರಮಾತ್ಮನಿಗೂ ಮಾನವ ಜನ್ಮದಲ್ಲಿ ಅಪಕೀರ್ತಿ ತಪ್ಪಲಿಲ್ಲ.

## ನರಕಾಸುರ.

ಶ್ರೀ ಕೃಷ್ಣನು ಒಂದು ದಿನ ಯಾದವ ಸಭೆಯಲ್ಲಿ ಕುಳಿತಿರುವಾಗ ದೇವೇಂದ್ರನು ಬಹಳ ದೀನ ಮುಖನಾಗಿ ಬಂದು ಕೃಷ್ಣನ ದರ್ಶನವನ್ನು ಪಡೆದನು. ಕೃಷ್ಣನಿಗೆ ನಮಸ್ಕಾರಮಾಡಿ ಆ ಸಕಲಲೋಕೇಶ್ವರನು "ದೇವ, ನರಕಾಸುರನ ದೆಸೆಯಿಂದ ನಮಗೆ ಜೀವಿಸುವುದೇ ಅಸಾಧ್ಯವಾಗಿದೆ. ಲೋಕಪಾಲಕರೂ ಕೂಡ ಅವನ ಕಾಟಕ್ಕೆ ಸಿಕ್ಕಿ ನೊಂದಿದ್ದಾರೆ. ದೇವ ವಧುಗಳಿಗೆ ಅವನ ಕಾಟ ಮಿಗಿಲಾಗಿದೆ. ಅರ್ಥದಿಂದ, ಅಭಿಮಾನದಿಂದ ನಾವು ನಿರರ್ಥರಾದೆವು ನೀನು ಕರುಣೆಯಿಂದ ನಮ್ಮನ್ನು ಕಾಪಾಡಬೇಕು." ಎಂದು ಕೇಳಿಕೊಂಡನು. ಆಗ ಕೃಷ್ಣನು ಅವನನ್ನು ಹಿಡಿದೆತ್ತಿ ಕರುಣೆ ಯಿಂದ ಸಂತೈಸಿ, " ನಾನಿರಲು ಭಕ್ತರಮೇಲೆ ಬೀಸುವಗಾಳಿ ಬಿರುಸಹುದೆ? ಅಂಜಬೇಡ, ನಾಳಿನದಿನವೇ ಅವನನ್ನು ಅಂತಕನ ಆಲಯದಲ್ಲಿ ತೋರಿಸು ತ್ತೇನೆ. " ಎಂದು ಹೇಳಿ ದೇವೇಂದ್ರನನ್ನು ಅಮರಾವತಿಗೆ ಕಳುಹಿಸಿಬಿಟ್ಟನು. ಆಮೇಲೆ ಕೃಷ್ಣನು ಗರುಡಾರೂಢನಾಗಿ ನರಕಾಸುರನ ಪಟ್ಟಣಕ್ಕೆ ಹೊರ ಟನು. ಹಿಮಗಿರಿಯ ತಪ್ಪಲಲ್ಲಿದ್ದ ಪ್ರಾಗ್ಜ್ಯೋತಿಷಪುರವೆಂಬ ಪಟ್ಟಣವನ್ನು ನೋಡಿದನು. ಅದರ ಪ್ರಾಕಾರ ಬಹಳ ಭಯಂಕರವಾಗಿ ಕಾಣುತ್ತಿತ್ತು. ಆದರೆ ಕೃಷ್ಣನು ತನ್ನ ಕೌಮೋದಕಿಯಿಂದ ಆ ದುರ್ಗದ ಕೋಟೆಯನ್ನು ಒಡೆದು ತನ್ನ ಬಾಣಘಾತದಿಂದ ದುರ್ಗದ ರಕ್ಷಕರನ್ನು ನೋಯಿಸಿದನು. ಚಕ್ರಾಯುಧದಿಂದ ಆ ಕೋಟೆಗೆ ಕಾವಲಾಗಿದ್ದ ಮುರಪಾಶವನ್ನು ಕತ್ತರಿಸಿ ಪಟ್ಟಣವನ್ನು ಪ್ರವೇಶಿಸಿ ತನ್ನ ಪಾಂಚಜನ್ಯವನ್ನು ಮೊಳಗಿಸಿದನು. ಸಿಡಿಲಿ

ನಂತೆ ಧ್ವನಿಮಾಡುತ್ತಿದ್ದ ಶಂಖದ ನಾದವನ್ನು ಕೇಳಿ ನರಕಾಸುರನು ಮೈಮು ರಿದೆದ್ದು ಸಿಂಹನಾದ ಮಾಡುತ್ತಾ ಯುದ್ಧಕ್ಕೆ ಹೊರಟನು. ಆಗ ಮುರ ನೆಂಬ ಇನ್ನೊಬ್ಬ ರಾಕ್ಷಸನು ಎದ್ದು ಬಂದು "ನನ್ನೊಡನೆ ಮಲೆವವರು ದೇವದಾನವರಲ್ಲಿ ಯಾರುಂಟು? ಕೈದುಗೊಳ್ಳು ಏಳು, ನಿನ್ನ ಹೆಂಡತಿಯ ಐದೆತನವು ಮುಗಿಯಿತು" ಎಂದು ನುಡಿದು ಶೂಲದಿಂದ ಕೃಷ್ಣನ ವಾಹನವಾದ ಗರುಡನನ್ನು ಹೊಡೆದನು. ಉರಿಯನ್ನುಉಗುಳುತ್ತ ಬರುತ್ತಿದ್ದ ಆ ಶೂಲವನ್ನು ಅಸುರರಿಪುವು ತನ್ನ ಬಾಣದಿಂದ ಕತ್ತರಿಸಿ ಹಾಕಿದನು. ಆಗ ಮುರನು ಬಹಳ ಸಿಟ್ಟಿನಿಂದ ತನ್ನ ಗದೆಯನ್ನು ಕೃಷ್ಣನ ಎದೆಗೆ ಗುರಿ ಇಟ್ಟು ಹೊಡೆದನು. ಆಗ ಸರ್ವಲೋಕೇಶ್ವರನು ತನ್ನ ಚಕ್ರಾಯುಧದಿಂದ ಆ ಗದೆಯನ್ನೂ ಅವನ ತಲೆಯನ್ನೂ ಕತ್ತರಿಸಿಹಾಕಿದನು. ಈ ಮುರ ಮಥನ ಮುಹೂರ್ತದಲ್ಲಿ ದೇವತೆಗಳು ಸಂತೋಷಗೊಂಡರು. ಮಲ್ಲಿಗೆಯ ಮಳೆ ಸುರಿಯಿತು. ಈ ಮುರನ ಕೊಲೆಯಿಂದ ನರಕಾಸುರನ ಸಾಮರ್ಥ್ಯ ವು ಕುಗ್ಗಿ ಹೋಯಿತೆಂದು ದೇವತೆಗಳ ಸಮೂಹ ಕೇಕೆ ಹಾಕಿದರು.

ಇತ್ತ ನರಕಾಸುರನ ದೂತರು ಮುರನ ವಧೆಯ ವರ್ತಮಾನವನ್ನು ಅವನಿಗೆ ಹೋಗಿ ತಿಳಿಸಿದರು. ಆ ದೈತ್ಯರ ರಾಯನು ಮಹಾ ರೋಷದಿಂದ ಗದಾಧಾರಿಯಾಗಿ ಯುದ್ಧಕ್ಕೆ ಹೊರಟು ಬಂದನು. ಆನೆಯನ್ನೇರಿ ದಾನವ ಪುಂಗವನು ಬರುತ್ತಾ ಗರುಡಾರೂಢನಾದ ಕೃಷ್ಣನನ್ನೂ ಅವನ ಹೆಂಡತಿ ಸತ್ಯಭಾಮೆಯನ್ನೂ ಕಂಡನು. ಕೃಷ್ಣನು ದೈತ್ಯೋತ್ತಮನನ್ನು ನೋಡಿ ತನ್ನ ಶಂಖವನ್ನು ಮೊಳಗಿಸಿದನು. ದಶದಿಕ್ಕುಗಳಲ್ಲಿಯೂ ಆ ಶಂಖಧ್ವನಿ ಯು ಪ್ರತಿಧ್ವನಿತವಾಯಿತು. ರಾಕ್ಷಸ ಸೈನ್ಯಕ್ಕೆ ಅಪಮೃತ್ಯು ಒದಗಿತೆಂಬ ಭೀತಿಯೇ ಉಂಟಾಯಿತು. ನರಕಾಸುರನು ಶಂಕಧ್ವನಿಯನ್ನು ಕೇಳಿ ಕಣ್ಣಿನಿಂದ ಕಿಡಿಗಳನ್ನು ಉಗುಳುತ್ತಾ ಒಂದು ದೊಡ್ಡ ಶತಘ್ನಿಯನ್ನು ಬೀಸಿ ಲಕ್ಷ್ಮೀಲೋಲನ ಮೇಲೆ ಎಸೆದನು. ಒಂದು ನಿಮಿಷದಲ್ಲಿ ಆ ಕಾಳಗದ ಕೈ ಮಾಟ ಜಗತ್ರಯವನ್ನೇ ಕಂಗೆಡಿಸಿತು. ರಾಕ್ಷಸಸೈನ್ಯ ಮೇಲೆ ಕವಿಯಿತು. ಅಸುರಾಂತಕನು ಬಾಣ ಸಮುದ್ರದಲ್ಲಿ ಮುಳುಗಿದನು. ಆದರೆ ಅರೆ ನಿಮಿಷ ದಲ್ಲಿ ಮೇಲೆದ್ದು ಎಲ್ಲರ ಬಾಣ ಸಮೂಹವನ್ನು ಕತ್ತರಿಸಿ ಶತ್ರು ಸೈನ್ಯದ ಆನೆ ಕುದುರೆ ರಥ ಮುಂತಾದುವು ಕತ್ತರಿಸಿಹೋಗುವಂತೆ ಬಾಣಪ್ರಯೋಗ ಮಾಡಿ

ದನು. ಪುರುಷೋತ್ತಮನನ್ನು ಎದುರಿಸಿದ ನರಕಾಸುರನಿಗೂ ಅವನ ಸೈನ್ಯ ಕ್ಕೂ ಅಂತ್ಯಕಾಲ ಸಂಪ್ರಾಪ್ತವಾಯಿತು. ತನ್ನ ಸೈನ್ಯವೆಲ್ಲ ಕೃಷ್ಣನ ಯುದ್ಧ ದಕ್ಷತೆಯಿಂದ ನಾಶವಾದುದನ್ನು ಕಂಡು ನರಕಾಸುರನಿಗೆ ಬಹಳ ವ್ಯಥೆಯಾ ಯಿತು. "ಗೋಪಾಲಕನಿಂದ ನನ್ನ ಬಲದ ಪರಾಕ್ರಮಕ್ಕೆ ಹಾನಿಯಾಗ ಬಹುದೇ ?" ಎಂದು ಚಿಂತಿಸುತ್ತಾ ಅವನು ದೊಡ್ಡದೊಂದು ತ್ರಿಶೂಲವನ್ನು ತೆಗೆದುಕೊಂಡು ಕೃಷ್ಣನ ಮೇಲೆ ಬೀಸಿದನು. ಅಸುರಾಂತಕನು ನಕ್ಕು ಇನ್ನು ವ್ಯರ್ಥ ಪರಿಶ್ರಮವೇಕೆಂದು ಯೋಚಿಸಿ ತನ್ನ ಚಕ್ರದಿಂದ ನರಕಾಸುರನ ತಲೆಯನ್ನು ಛೇದಿಸಿದನು. ಅವನ ತಲೆ ನೆಲಕ್ಕೆ ಬಿತ್ತು. ಅಮರರು ಅಂಬರದಲ್ಲಿದ್ದು ಕೃಷ್ಣನ ಪೌರುಷವನ್ನು ಕೊಂಡಾಡಿ ಹೂ ಮಳೆಗಳನ್ನು ಸುರಿದರು. ಪೌರರು ಪ್ರೇಮದಿಂದ ಕೊಟ್ಟ ಅರ್ಘ್ಯಾದಿ ಸತ್ಕಾರವನ್ನು ಕೈ ಕೊಳ್ಳುತ್ತಾ ಕೃಷ್ಣನು ಪ್ರಾಗ್ಜ್ಯೋತಿಷವನ್ನು ಪ್ರವೇಶಿಸಿದನು. ನರಕಾಸುರನು ಸೂರೆಗೊಂಡು ತಂದಿದ್ದ ವರುಣನ ಛತ್ರ ಮಂಡಲವನ್ನು ಅವನಿಗೆ ಕೊಟ್ಟು ಕಳುಹಿಸಿದನು. ಇತರ ದೇವತೆಗಳ ಸ್ವತ್ತುಗಳನ್ನು ಅವರವರಿಗೆ ಹಿಂತಿರು ಗಿಸಿ ಕೊಡುತ್ತ ನರಕಾಸುರನ ಮಗನಾದ ಭಗದತ್ತನನ್ನು ಆದರಿಸಿ ಅವನ ತಂದೆಯ ರಾಜ್ಯವನ್ನು ಅವನಿಗೇ ಕೊಟ್ಟನು. ತರುವಾಯ ನರಕಾಸುರನು ದೇವಕನ್ಯೆರಯನ್ನು ಸೆರೆ ಇಟ್ಟಿದ್ದ ಮನೆಯನ್ನು ಹೊಕ್ಕು ಅವರುಗಳನ್ನು ಸೆರೆ ಯಿಂದ ಬಿಡಿಸಿದನು. ಅವರು ಕೃಷ್ಣನನ್ನೇ ವರಿಸಲು ಅವರುಗಳನ್ನು ಕೃಷ್ಣನು ಅಂದಣಗಳಲ್ಲಿ ಕೂಡಿಸಿ ದ್ವಾರಕೆಗೆ ಕಳುಹಿಸಿಕೊಟ್ಟನು. ಆ ನಾರಿಯರ ತನು ರಕ್ಷೆಗೆ ಭಟರನ್ನು ಕಳುಹಿಸಿ ಅಪಾರವಾದ ಧನವನ್ನು ಮೇಲೆ ಹೇರಿ ತನ್ನ ನಗರಕ್ಕೆ ಕಳುಹಿಸಿದುದಲ್ಲದೆ ನರಕಾಸುರನ ಪರಿಜನಕ್ಕೂ ಆ ಪುರದ ನಾಗರಿ ಕರಿಗೂ ಅಭಯವನ್ನು ನೀಡಿ ಅಶೇಷ ಸುರಕುಲಕ್ಕೆ ಸಂತೋಷವನ್ನುಂಟು ಮಾಡಿದನು.

## ಸುಭದ್ರೆಯ ಮದುವೆ

ಪಾಂಡವ ಮಧ್ಯಮನಾದ ಪಾರ್ಥನು ತೀರ್ಥಯಾತ್ರೆಗೆಂದು ಹೊರಟು ಒಂದು ವರ್ಷಕಾಲ ದೇಶದಲ್ಲೆಲ್ಲ ಸಂಚರಿಸಿ ಒಂದು ದಿನ ಪ್ರಭಾಸಕ್ಕೆ ಬಂದು ಸೇರಿದನು. ಅಲ್ಲಿ ಅವನು ಶ್ರೀಕೃಷ್ಣನ ತಂಗಿಯಾದ

ಸುಭದ್ರೆಯ ಅನುಪಮ ಸೌಂದರ್ಯದ ಕೀರ್ತಿಯನ್ನು ಕೇಳಿ ಮೋಹ ಗೊಂಡನು. ಬಲರಾಮನು ಅವಳನ್ನು ದುರ್ಯೋಧನನಿಗೆ ಕೊಟ್ಟು ಮದುವೆಮಾಡಬೇಕೆಂದು ಸಂಕಲ್ಪಿಸಿದ್ದನೆಂದು ಕೇಳಿ ಅರ್ಜುನನ ಮನಸ್ಸಿನಲ್ಲಿ ಕಳವಳವುಂಟಾಯಿತು. ಬಲರಾಮನಿಗೆ ಸನ್ಯಾಸಿಗಳು, ಮುನಿಗಳು, ಮುಂತಾದವರಲ್ಲಿ ಅಕೃತ್ರಿಮಭಕ್ತಿಯೆಂಬುದನ್ನು ತಿಳಿದಿದ್ದ ಪಾರ್ಥನು ಕೂಡಲೆ ಸನ್ಯಾಸಿಯ ವೇಷ ಧರಿಸಿ ದ್ವಾರಕೆಗೆ ಹೊರಟನು. ವಾಸುದೇವ ಸ್ಮರಣೆ ಮಾಡುತ್ತಾ ದಂಡಧಾರಿಯಾಗಿ ಬಂದ ಈ ತರುಣ ಸನ್ಯಾಸಿಯನ್ನು ಕಂಡು ಬಲರಾಮನು ಬಹಳ ಆದರದಿಂದ ಸ್ವಾಗತಿಸಿ ಅರಮನೆಗೆ ಬಿಜಯ ಮಾಡಿಸಿದನು. ತಾರುಣ್ಯದಲ್ಲಿಯೇ ವೈರಾಗ್ಯಶಾಲಿಯಾದ ಆ ಸನ್ಯಾಸಿಯ ವರ್ಚಸ್ಸನ್ನು ಬಲರಾಮನು ಬಹಳವಾಗಿ ಕೊಂಡಾಡಲು, ಶ್ರೀಕೃಷ್ಣನು ಇವನಾರೆಂಬುದನ್ನು ತನ್ನ ದಿವ್ಯದೃಷ್ಟಿಯಿಂದರಿತು ನಸುನಕ್ಕನು. ಆ ನಗುವು ಬಲರಾಮನಿಗೆ ಸರಿಬೀಳಲಿಲ್ಲವಾದರೂ ಸನ್ಯಾಸಿಯನ್ನು ಸತ್ಕರಿಸುವ ಭರದಿಲ್ಲಿದ್ದುದರಿಂದ ಅದನ್ನು ಅವನು ಅಷ್ಟಾಗಿ ಮನಸ್ಸಿಗೆ ತಂದುಕೊಳ್ಳಲಿಲ್ಲ.

ಬಲರಾಮನು ಕಪಟಸನ್ಯಾಸಿಯನ್ನು ಭದ್ರಾಸನದಲ್ಲಿ ಕಳ್ಳಿರಿಸಿ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಸತ್ಕರಿಸಿ ಕೈಮುಗಿದುಕೊಂಡು "ತಮ್ಮ ಬರವಿನಿಂದ ನಮ್ಮ ಈ ಮಂದಿರ ಪರಮಪಾವನವಾಯಿತು. ತಾವು ಎಲ್ಲಿಂದ ಬಂದಿರಿ?" ಎಂದು ಕೇಳಿದನು. ಅರ್ಜುನನು ತನ್ನ ವೇಷಕ್ಕೆ ತಕ್ಕ ಭಾಷೆಯನ್ನು ಬಳಸಿ ಹೀಗೆ ಉತ್ತರಕೊಟ್ಟನು. "ಜಲಧಿಯಲ್ಲಿ ನೀರಗುಳ್ಳೆಗಳು, ಅಲೆಗಳು ಕಾಣಿಸಿಕೊಂಡು ಮತ್ತೆ ಅದರಲ್ಲಿಯೇ ಲೀನವಾಗಿ ಹೋಗುವಹಾಗೆ ಸುರನರತಿರ್ಯಗಾದಿರೂಪಗಳು ಆ ಪರಮಾತ್ಮನಿಂದ ಮೂಡಿ ದಿಟದಂತೆ ಕಂಡು ಮತ್ತೆ ಆತ್ಮನಲ್ಲಿಯೇ ಲಯಹೊಂದುತ್ತವೆ. ಆತ್ಮನಿಗೆ ಅಳಿವಿಲ್ಲ. ಅವನು ಅಖಂಡನು; ಅಕ್ರಿಯನು, ಆತ್ಮವಲ್ಲದೆ ಈ ಜಗತ್ತಿನಲ್ಲಿ ಬೇರೇನೂ ಇಲ್ಲ. ತತ್ವಜ್ಞಾನ ಶೂನ್ಯರು ವೃಥಾ ಸಂಸಾರದಲ್ಲಿ ತೊಳಲುತ್ತಾರೆ. ಯೋಗಿವರರ ಪಾದಸೇವೆ ಮಾಡಿದ ಹೊರತು ಈ ಅಜ್ಞಾನ ಹೋಗುವುದಿಲ್ಲ. ಯೋಗಿವರರಿಗೆ ಬಹಳ ಮಾತು ಸೇರದು. ನನ್ನಂಥವರು ಏಕಾಂತವಾಸಿಗಳಾಗಿರಬಯಸುವೆವು. ಇನ್ನು ನಮ್ಮನ್ನು ಬೀಳ್ಕೊಡು."

ಬಲರಾಮನು ಸನ್ಯಾಸಿಯ ಜ್ಞಾನಸಭಾಷಣದಿಂದ ಬೆರಗಾಗಿ ಸ
ಪ್ರಯತ್ನದಿಂದಲೂ ಆತನನ್ನು ತಮ್ಮಲ್ಲಿಯೇ ಉಳಿಸಿಕೊಳ್ಳಬೇಕೆಂಬ ಕಿ
ಯಾಸೆಯಿಂದ ತನ್ನ ಅರಮನೆಯಲ್ಲಿಯೇ ಆತನಿಗೆ ಬಿಡಾರ ಕಲ್ಪಿಸುವುದಾ
ಹೇಳಿ ಮುಂದಿನ ಚಾತುರ್ಮಾಸ್ಯವನ್ನು ತಮ್ಮಲ್ಲಿಯೇ ಕಳೆಯಬೇಕೆಂ
ಬೇಡಿದನು. ಅರ್ಜುನನು ಅರೆಮನಸ್ಸಿನಿಂದ ಒಪ್ಪಿಕೊಂಡವನಹಾಗೆ ನ
ಸುತ್ತಾ "ಅಯ್ಯಾ ನನ್ನನ್ನೇಕೆ ಹೀಗೆ ನಿರ್ಬಂಧಪಡಿಸುವೆ? ನನಗೆ ಜ
ಸಮ್ಮರ್ದ ಸಹಿಸದು. ಅವರಿವರು ಪರಿಚರ್ಯೆಮಾಡಲಾಗದು. ನನ್ನಿ
ನಿಮಗೆ ವೃಥಾ ಹಿಂಸೆ ನನ್ನನ್ನು ಬೀಳ್ಕೊಡಿ" ಎಂದನು. ಬಲರಾಮ
ಭಕ್ತ್ಯತಿಶಯದಿಂದ "ಸ್ವಾಮಿ, ತಮ್ಮಂಥಾ ಸುಜ್ಞಾನಿಗಳ ಸೇವೆ ಎ
ಗಾದರೂ ಹಿಂಸೆಯೆಂದು ತೋರೀತೆ? ನನ್ನ ತಂಗಿ ಸುಭದ್ರೆಯು ಬ
ವ್ರತನಿಷ್ಠೆಯಾದವಳು. ಅವಳು ನಿಮ್ಮ ಊಟಉಪಚಾರಗಳನ್ನು ನೋ
ಕೊಳ್ಳುವಂತೆ ಏರ್ಪಡಿಸುತ್ತೇನೆ. ತಾವು ಕನ್ಯಾಂತಃಪುರದಲ್ಲಿ ಇದ್ದುಬಿ
ಅಲ್ಲಿಗೆ ಯಾರೂ ಹೊರಗಿನವರು ಬರುವಂತಿಲ್ಲ. ನಿಮ್ಮ ಏಕಾಂತಕ್ಕೆ ಭ
ಬರುವುದಿಲ್ಲ" ಎಂದು ಮತ್ತೆ ಪ್ರಾರ್ಥಿಸಿಕೊಂಡನು. ಆಗ ಸನ್ಯಾ
ತೃಪ್ತಿಯಾಯಿತು. ಚಾತುರ್ಮಾಸ್ಯವನ್ನು ದ್ವಾರವತಿಯ ಅರಮನೆ
ಕನ್ಯಾಂತಃಪುರದಲ್ಲಿ ಕಳೆಯುವುದೆಂದು ನಿರ್ಣಯವಾಯಿತು.

ಶ್ರೀಕೃಷ್ಣನು ಸನ್ಯಾಸಿಯ ನಿಜ ಸ್ವರೂಪವನ್ನು ತನ್ನ ದಿವ್ಯ ದೃ
ಯಿಂದ ತಿಳಿದುಕೊಂಡು ಸಂತುಷ್ಟನಾದನು. ತನ್ನ ತಂಗಿ ಸುಭದ್ರೆಯ
ಅರ್ಜುನನಿಗೇ ಕೊಡಬೇಕೆಂದು ಅವನು ಇಷ್ಟಪಟ್ಟಿದ್ದನು. ವಸುದೆ
ದೇವಕಿಯರಿಗೂ ಅದು ಪ್ರಿಯವಾದ ಬಾಂಧವ್ಯವೆನಿಸಿತ್ತು. ಬಲರಾ
ದೇವನಿಗೊಬ್ಬನಿಗೇ ಅದು ಸರಿ ಬೀಳದುದು. ಸುಭದ್ರೆಯೂ ಅಂತರಂಗ
ಪಾರ್ಥನಮೇಲೆ ಒಲವುಳ್ಳವಳು. ಇದನ್ನೆಲ್ಲ ಮನಗಂಡಿದ್ದ ಶ್ರೀಕೃಷ್ಣ
ಬಲರಾಮನ ಪೂಜೆಗೆ ಪಾತ್ರನಾಗಿದ್ದ ಸನ್ಯಾಸಿಯ ನಿಜ ಸ್ವರೂಪವ
ಸುಭದ್ರೆಗೂ ವಸುದೇವ ದೇವಕಿಯರಿಗೂ ಏಕಾಂತದಲ್ಲಿ ಹೇಳಲು ಅವ
ಬಹಳ ಹರ್ಷಪಟ್ಟರು; ಸುಭದ್ರೆ ಸನ್ಯಾಸಿಯ ಪರಿಚರ್ಯೆ ಮಾಡ
ಅವರು ಅಡ್ಡಿಪಡಿಸಲಿಲ್ಲ.

ಇತ್ತ ಸುಭದ್ರೆಗೆ ಪತಿಯ ಪರಿಚಯವಾಯಿತು. ಆ ಯತಿಗೆ ಸ

ಸರಸಿಜಾನನೆಯ ಸಂದರ್ಶನ ಲಭಿಸಿತು. ಅವನ ಕೈ ಜಪಮಾಲೆಯನ್ನಾಡಿ ಸುತ್ತಿದ್ದರೂ ಮನಸ್ಸು ಸುಭದ್ರೆಯ ಅಪಹರಣದ ಮಾರ್ಗವನ್ನು ಕುರಿತು ಯೋಚಿಸುತ್ತಿತ್ತು. ಬಲರಾಮಾದಿಗಳು ಬಂದು ಕಂಡಾಗ ವೈರಾಗ್ಯದ ಮಾತುಗಳು ಮೊದಲಿನಂತೆಯೇ ನಡೆಯುತ್ತಿದ್ದುವು. ಅವರ ಜತೆಯಲ್ಲಿ ಬಂದಾಗ ಕೃಷ್ಣನೂ ಸನ್ಯಾಸಿಗೆ "ಭಕ್ತಿ" ಯಿಂದ ನಮಸ್ಕರಿಸುತ್ತಿದ್ದನು. ಆ ಸಮಯದಲ್ಲಿ ನಗುವನ್ನು ತಡೆದು ಕೊಳ್ಳುವುದು ಸುಭದ್ರೆಗೂ ಅರ್ಜುನನಿಗೂ ಬಹಳ ಕಷ್ಟವೆನಿಸುತ್ತಿತ್ತು. "ಈ ನಾಟಕ ಹೇಗೆ ಮುಗಿಯುವುದೋ!" ಎಂಬ ಆತಂಕ ಅರ್ಜುನನ್ನು ಬಾಧಿಸುತ್ತಲೇ ಇತ್ತು. ಜಗನ್ನಾಟಕ ಸೂತ್ರಧಾರನಲ್ಲವೆ, ಶ್ರೀಕೃಷ್ಣನು? ಅವನು ತನ್ನ ಗೆಳೆಯನ ಮನದ ತಳಮಳವನ್ನು ಅರಿತುಕೊಂಡು ಅದಕ್ಕೆ ಪರಿಹಾರವನ್ನು ಕಲ್ಪಿಸಿದನು.

ಒಂದುದಿನ ಬಲರಾಮನೊಡನೆ ಸಮಸ್ತ ಯಾದವರೂ ದ್ವಾರವತಿಯ ಸಮೀಪದ ರೈವತಕಪರ್ವತಕ್ಕೆ ವಿಹಾರಕ್ಕೆಂದು ಹೊರಟರು. ಕೃಷ್ಣನೂ ಅವರೊಡನೆ ಹೋಗಬೇಕಾಗಿತ್ತು. ಅವನು ಹೊರಡುವ ಮುನ್ನ ಸನ್ಯಾಸಿ ದೇವರಿಗೆ ಏಕಾಂತ ದರ್ಶನವಿತ್ತು ಅವನಿಗೆ ಬೇಕಾದ ಬಿಲ್ಲು ಬತ್ತಳಿಕೆ ಬಾಣಗಳನ್ನು ಕೊಟ್ಟು ರಥ ಮತ್ತು ರಥಾಶ್ವಗಳು ಇರುವ ಸ್ಥಳವನ್ನು ತಿಳಿಸಿ ಸುಭದ್ರೆಗೆ ಧೈರ್ಯ ಹೇಳಿ ಹೊರಟು ಹೋದನು. ಬಲರಾಮನು ಇದನ್ನೆಲ್ಲ ಅರಿಯನು! ಸಂಜೆಯೊಳಗೆ ಹಿಂತಿರುಗುವುದಾಗಿ ಸನ್ಯಾಸಿ ದೇವರಿಗೆ ಮಾತುಕೊಟ್ಟು ಅವನು ರೈವತಕಕ್ಕೆ ಹೊರಟನು.

ಯಾದವರೆಲ್ಲ ಹೊರಟ ಕೊಂಚ ಹೊತ್ತಿನಮೇಲೆ ಸನ್ಯಾಸಿ ದೇವರ ಮನಸ್ಸು ನಿರ್ಮಲವಾಯಿತು. ಅವನು . ತನ್ನ ಕೃತಕ ವೇಷವನ್ನು ಪರಿಹರಿಸಿ ದಂಡ ಕೋಲನ್ನೂ ಜಪಮಾಲೆಯನ್ನೂ ಬಿಸುಟು ಬಿಟ್ಟು ದಿವ್ಯದುಕೂಲವನ್ನು ಧರಿಸಿ ಸತೀ ಸಮೇತನಾಗಿ ರಥಹತ್ತಿ ಹಸ್ತಿನಾವತಿಯ ಕಡೆಗೆ ಹೊರಟನು. ದ್ವಾರಕೆಯಲ್ಲಿ ಉಳಿದಿದ್ದ ರಾಜಭಟರು ತಮ್ಮ ರಾಜಪುತ್ರಿಯು ಯಾವನೋ ಅಪರಿಚಿತನೊಡನೆ ರಥದಲ್ಲಿ ಹೋಗುತ್ತಿರುವುದನ್ನು ಕಂಡು ಗಾಬರಿಯಿಂದ ಬೆನ್ನಟ್ಟಿದರು; ಬಾಣದ ಮಳೆಗರೆದರು. ಆದರೆ ಪಾರ್ಥನ ಮುಂದೆ ಅವರ ಪರಾಕ್ರಮ ನಡೆದೀತೆ! ಹಲವರು ಸೋತು ಹಿಮ್ಮೆಟ್ಟಿದರು. ಸುಭದ್ರೆಯೇ ಸಾರಥ್ಯ ಮಾಡುತ್ತಿರುವುದನ್ನು ಕಂಡು ಅವರು ಕಂಗೆ

ಟ್ಟರು. ಸುಭದ್ರೆಯ ಅಪಹರಣ ಮಾಡುತ್ತಿರುವವನು ಪಾರ್ಥನೆಂದು ತಿಳಿದ ಮೇಲೆ ಅನೇಕರು ಇದೇನೋ ಕೃಷ್ಣನ ತಂತ್ರವಿರಬೇಕೆಂದು ಬಗೆದು ಯುದ್ಧ ಪ್ರಯತ್ನವನ್ನು ಕೈಬಿಟ್ಟರು. ಇನ್ನು ಕೆಲವರು ಓಡಿಹೋಗಿ ಬಲರಾಮನಿಗೆ ವರ್ತಮಾನ ಕೊಟ್ಟರು.

ಸನ್ಯಾಸಿಯ ವೃತ್ತಾಂತವನ್ನು ದೂತರ ಬಾಯಿಂದ ಕೇಳಿದ ಹಲಧರನು ಪ್ರಳಯಕಾಲದ ಯಮನಂತೆ ಕೋಪದಿಂದ ಮಸಗಿದನು. ಅರ್ಜುನನು ಹೀಗೆ ವೇಷಾಂತರದಿಂದ ಬಂದು ತನ್ನನ್ನು ಮೋಸಪಡಿಸಿದ್ದಕ್ಕೆ ತಕ್ಕ ದಂಡನೆ ಮಾಡಲೇಬೇಕೆಂದು ಹಲಮುಸಲಗಳನ್ನು ತೆಗೆದುಕೊಂಡು ಬಲಭದ್ರನು ಹೊರಡುತ್ತಿರಲು ಶ್ರೀಕೃಷ್ಣನು ಅವನನ್ನು ತಡೆದು ನಿಲ್ಲಿಸಿ "ಅಣ್ಣಾ ಇದೇಕೀ ಕೋಪ? ಏನು ಸಮಾಚಾರ? ಎಲ್ಲಿಗೆಹೊರಟೆ?" ಎಂದು ಏನೂ ತಿಳಿಯದವನಂತೆ ಪ್ರಶ್ನೆ ಮಾಡಿದನು. ಬಲರಾಮನಿಗೆ ಇದರಿಂದ ಇನ್ನಷ್ಟು ರೇಗಿಹೋಯಿತು. ಅವನು ಕೃಷ್ಣನ ಮೇಲೆಯೇ ಸಿಟ್ಟಾಗಿ, ಇದೆಲ್ಲ ನಿನ್ನ ಮಾಯಾತಂತ್ರವೆಂದು ತೋರುತ್ತದೆ. ಇಲ್ಲದಿದ್ದರೆ ಆ ಬಡ ಪಾರ್ಥನಿಗೆ ಇಷ್ಟು ಧೈರ್ಯವೆಲ್ಲಿಂದ ಬರಬೇಕು? ಅವನು ಯತಿವೇಷದಲ್ಲಿ ಬಂದು ಸುಭದ್ರೆಯನ್ನು ಅಪಹರಿಸ ಬಹುದೆ?" ಎಂದು ಕೂಗಾಡಿದನು.

ಕೃಷ್ಣನು ಅಣ್ಣನ ಮಾತುಗಳಿಂದ ಸಿಟ್ಟುಗೊಳ್ಳಲಿಲ್ಲ; ಬೇಸರ ಪಡಲಿಲ್ಲ. ಅವನು ಶಾಂತಚಿತ್ತನಾಗಿ "ಅಣ್ಣಾ, ಇದಕ್ಕೆ ನೀನೇಕೆ ಸಿಟ್ಟಾಗಬೇಕು? ದೈವವೇ ಈ ಬಾಂಧವ್ಯವನ್ನು ಸಂಘಟಿಸಿತೆಂದು ತಿಳಿ. ಪಾರ್ಥನೇನು ನಮಗೆ ಅನ್ಯನೆ? ಅವನು ನಮ್ಮಯ್ಯನಿಗೆ ಸೋದರಳಿಯನಲ್ಲವೆ? ಸುಭದ್ರೆಗೆ ಅವನು ಅನುರೂಪ ವರನು. ಬೇಸರಪಡಬೇಡ" ಎಂದು ಸಮಾಧಾನದ ಮಾತುಗಳನ್ನಾಡಿದನು. ವಸುದೇವಾದಿ ಯಾದವ ವೃದ್ಧರೆಲ್ಲ ಸೇರಿ ಬಲರಾಮನನ್ನು ಹೇಗೋ ಸಮಾಧಾನಪಡಿಸಿದರು.

ಬಳಿಕ ಶ್ರೀಕೃಷ್ಣನು ರಥಾರೂಢನಾಗಿ ಪಾರ್ಥನನ್ನು ಸೇರಿ ಮಾರ್ಗಮಧ್ಯದಿಂದ ಅವನನ್ನು ದ್ವಾರಕಿಗೆ ಕರೆದುಕೊಂಡು ಬಂದು ಸುಭದ್ರಾರ್ಜುನರ ಮದುವೆಯನ್ನು ಮಹಾವಿಜೃಂಭಣೆಯಿಂದ ನೆರವೇರಿಸಿದನು. ವಸುದೇವನು ಮಗಳಿಗೆ ಮಿಗಿಲಾದ ಬಳುವಳಿಯನ್ನು ಕೊಟ್ಟು ಮನಃಪೂರ್ವಕವಾಗಿ ಹರಸಿದನು. ತರುವಾಯ ಶ್ರೀಕೃಷ್ಣನು ಅರ್ಜುನ ಸುಭದ್ರೆಯರನ್ನು

ರಥದಲ್ಲಿ ಕೂಡಿಸಿಕೊಂಡು ತಾನೇ ಸಾರಥಿಯಾಗಿ ಇಂದ್ರಪ್ರಸ್ಥಕ್ಕೆ ಪ್ರಯಾಣ ಮಾಡಿದನು. ವಸುದೇವ, ದೇವಕಿ, ಬಲರಾಮನೇ ಮೊದಲಾದ ಸಮಸ್ತರೂ ಅವರನ್ನು ಪ್ರೀತಿಯಿಂದ ಬೀಳ್ಕೊಟ್ಟರು.

ಭಕ್ತಕುಟುಂಬಿಯಾದ ಶ್ರೀಕೃಷ್ಣನು ಉಪಾಯದಿಂದ ಪಾರ್ಥ ಸುಭದ್ರೆಯರ ವಿವಾಹವನ್ನು ಸಾಧಿಸಿ ಅವರೊಡನೆ ಹೊರಟುಬಂದು ಇಂದ್ರಪ್ರಸ್ಥವನ್ನು ನೇರಿದರು. ತೀರ್ಥಯಾತ್ರೆಗೆಂದು ಹೊರಟ ಅರ್ಜುನನು ಸತೀಸಮೇತನಾಗಿ ಬಂದುದಲ್ಲದೆ ಜತೆಯಲ್ಲಿ ಪಾಂಡವ ಪ್ರಾಣನೆನಿಸಿದ ಶ್ರೀಕೃಷ್ಣನನ್ನು ಕರೆತಂದುದನ್ನು ಕಂಡು ಧರ್ಮರಾಯಾದಿಗಳು ಹರ್ಷಪರವಶರಾದರು. ಬಹಳ ದಿನಕ್ಕೆ ಬಂದ ಕೃಷ್ಣನನ್ನು ಕುಂತಿ ಆದರದಿಂದ ಸ್ವಾಗತಿಸಿ ಉಪಚರಿಸಿದಳು. ಕೃಷ್ಣನಾದರೋ ದ್ವಾರಕಿಯನ್ನು ಮರೆತವನಂತೆ ಹಲವು ತಿಂಗಳು ಪಾಂಡವರಲ್ಲಿಯೇ ನಿಂತುಬಿಟ್ಟನು.

## ಅಗ್ನಿದೇವನಿಗೆ ಔತಣ

ಒಂದು ದಿನ ಕೃಷ್ಣಾರ್ಜುನರು ಬೇಟೆಯಲ್ಲಿ ಆಸಕ್ತಿಯುಳ್ಳವರಾಗಿ ಖಾಂಡವ ವನವನ್ನು ಪ್ರವೇಶಿಸಿದರು. ಅಲ್ಲಿಯ ಫಲಭರಿತವಾದ ಮರಬಳಿಗಳನ್ನೂ ಪರಿಮಳ ಭರಿತ ಪುಷ್ಪಗಳನ್ನೂ ನೋಡಿ ಸಂತೋಷಪಟ್ಟು ವನದಲ್ಲೆಲ್ಲ ಸಂಚರಿಸಿ ಹಲವು ಮೃಗಗಳ ಬೇಟೆಯಾಡುತ್ತ ದಟ್ಟವಾದ ಅರಣ್ಯವನ್ನು ಪ್ರವೇಶಿಸಿ ಪಾರ್ಥ ಪುರುಷೋತ್ತಮರು ಪರಿಜನರಿಂದ ಬೇರೆಯಾದರು. ಮಧ್ಯಾಹ್ನ ಸಮಯದಲ್ಲಿ ಅವರು ಬಿಸಿಲಿನ ಬೇಗೆಯಿಂದ ಆಯಾಸಗೊಂಡು ಒಂದು ಸರೋವರವನ್ನು ಸಮೀಪಿಸಿ ವಿಶ್ರಾಂತಿಗಾಗಿ ಬಳಿಯ ಹಸುರುಹುಲ್ಲಿನ ಮೇಲೆ ಕುಳಿತು ಸುತ್ತಲ ಬನಸಿರಿಯನ್ನು ನೋಡುತ್ತಿದ್ದರು. ಆ ಸಮಯದಲ್ಲಿ ಅಲ್ಲಿಗೆ ಸುಂದರನೂ ಮಹಾತೇಜಸ್ವಿಯೂ ಆದ ಒಬ್ಬ ಬ್ರಾಹ್ಮಣನು ಬಂದನು. ಈ ಗೊಂಡಾರಣ್ಯದಲ್ಲಿಗೆ ಈ ಬ್ರಾಹ್ಮಣನು ಹೇಗೆ ಬಂದನೆಂದು ಆಶ್ಚರ್ಯಪಟ್ಟು ಕೃಷ್ಣಾರ್ಜುನರು ಅವನಿಗೆ ನಮಸ್ಕಾರಮಾಡಿದರು. ಅವನು ಇವರನ್ನು ಆಶೀರ್ವದಿಸಿ " ಅಯ್ಯಾ ನನಗೆ ಇಷ್ಟ ಭೋಜನವನ್ನು ಅನುಗ್ರಹಿಸಬೇಕು" ಎಂದು ಬೇಡಿದನು. ಒಬ್ಬನ ಭೋಜನ ಯಾವ ದೊಡ್ಡ ವಿಚಾರವೆಂದು ಬಗೆದು ಅರ್ಜುನನು ಹಿಂದುಮುಂದು ಯೋಚಿಸದೆ " ಆಗಲಿ. ಅದಕ್ಕೇ

ನಾಗಬೇಕು ? ನಿನಗೆ ಇಷ್ಟವಾದ ಭೋಜನವಾವುದು? ಹೇಳು" ಎಂದು ನುಡಿದನು. ಆ ಬ್ರಾಹ್ಮಣನು ಇದರಿಂದ ಸಂತುಷ್ಟನಾದರೂ ಕೂಡಲೆ ತನ್ನ ಆಸೆಯನ್ನು ಹೊರಗೆಡವದೆ "ಅಯ್ಯಾ, ಕೊಡುವುದು ಖಂಡಿತವಾದರೆ ಹೇಳುತ್ತೇನೆ." ಎಂದನು. ಅರ್ಜುನನು ಅಭಯ ಕೊಟ್ಟಮೇಲೆ "ಈ ಖಾಂಡವವೇ ನನ್ನ ಊಟಕ್ಕೆ ಉಪಯುಕ್ತವಾಗಿದೆ" ಎಂದನು. ಈ ವಿಚಿತ್ರವಾದ ಉತ್ತರವನ್ನು ಕೇಳಿ ಅರ್ಜುನನು ಕೊಂಚ ಸೋಜಿಗಪಟ್ಟು "ಅಯ್ಯಾ ಬ್ರಾಹ್ಮಣ, ಈ ಕಾಡನ್ನು ನೀನು ಹೇಗೆ ತಿನ್ನುವೆ?" ಎಂದು ಪ್ರಶ್ನೆಮಾಡಲು ಆ ಬ್ರಾಹ್ಮಣನು ಮಾಯವಾಗಿ ಅವನ ಸ್ಥಾನದಲ್ಲಿ ಯಜ್ಞೇಶ್ವರನು ಕಾಣಿಸಿಕೊಂಡನು.

ಅರ್ಜುನನು ಅಗ್ನಿದೇವನನ್ನು ಕಂಡು ಬೆರಗಾಗಿ "ಸರ್ವಭಕ್ಷಕನಾದ ನಿನಗೆ ಈ ವನವನ್ನು ಇನ್ನೊಬ್ಬರು ಕೊಡಬೇಕೆ? ಇದಕ್ಕೆ ನೀನು ವೇಷಾಂತರದಿಂವ ನನ್ನನ್ನು ಬೇಡಲೇಕೆ?" ಎಂದನು. ಆಗ ಅಗ್ನಿಯು "ಪಾರ್ಥ, ಈ ವನವು ಸ್ವರ್ಗದ ಒಡೆಯನಾದ ದೇವೇಂದ್ರನಿಗೆ ಸೇರಿದುದು. ಆದ್ದರಿಂದ ಇದನ್ನು ನುಂಗಲು ನನಗೆ ಧೈರ್ಯ ಸಾಲದು" ಎಂದನು. "ಅಯ್ಯಾ ಭಯಪಡಬೇಡ, ನಾನಿದ್ದೇನೆ. ನಿನ್ನ ಊಟ ಸಾಗಲಿ" ಅರ್ಜುನನ ಈ ಮಾತುಗಳನ್ನು ಕೇಳಿದ ಕೃಷ್ಣನು "ಪಾರ್ಥ, ನಿನ್ನ ಧಾರಾಳ ಬುದ್ಧಿ ಮೆಚ್ಚತಕ್ಕದ್ದೇ ಸರಿ. ಆದರೆ ಈಗ ಇಂದ್ರನು ನಿನ್ನೊಡನೆ ಕಾಳಗಕ್ಕೆ ಬಂದರೆ ನಿರ್ವಹಿಸಬಲ್ಲೆಯಾ ? ಸಮರ ಸನ್ನದ್ಧನಾಗಿರುವೆಯಾ ?" ಎಂದು ಕೇಳಲು ಪಾರ್ಥನಿಗೆ ಆಗ ಜ್ಞಾನೋದಯವಾಯಿತು. ಅವನು ಅಗ್ನಿ ದೇವನನ್ನು ಕುರಿತು "ಅಯ್ಯಾ ಈಗ ನನ್ನ ರಥವಾಗಲಿ, ನನ್ನ ಸ್ವಂತ ಧನುಸ್ಸಾಗಲೀ ಇಲ್ಲಿಲ್ಲ. ದಿವ್ಯಾಸ್ತ್ರಗಳನ್ನೂ ನಾನು ಜತೆಯಲ್ಲಿ ತಂದಿಲ್ಲ. ನಾನು ಕೇವಲ ಮೃಗಯಾವಿಹಾರಕ್ಕೆಂದು ಬಂದವನು. ಇಂಥಾ ಸಮಯದಲ್ಲಿ ನೀನು ಬಂದೆಯಲ್ಲಾ ?" ಎಂದು ಪೇಚಾಡಲು ಅಗ್ನಿಯು ಅರ್ಜುನನಿಗೆ ಬಿಳಿಯ ಕುದುರೆಗಳನ್ನು ಕಟ್ಟಿದ ಒಂದು ದಿವ್ಯ ರಥವನ್ನೂ ಗಾಂಡೀವವೆಂಬ ದಿವ್ಯ ಧನುಸ್ಸನ್ನೂ ಅಕ್ಷಯವಾದ ಬಾಣಗಳಿಂದ ಕೂಡಿದ ಒಂದು ಬತ್ತಳಿಕೆಯನ್ನೂ ಕೊಟ್ಟನು. ಇವೆಲ್ಲವನ್ನೂ ಕೃತಜ್ಞತೆಯಿಂದ ಸ್ವೀಕರಿಸಿ ಅರ್ಜುನನು "ಇನ್ನು ನೀನು ಬೇಗ ಮಾಡು. ನಿನ್ನ ಊಟ ಸಾಗಲಿ" ಎಂದನು.

ಅರ್ಜುನನ ಮಾತು ಮುಗಿಯುವ ಮೊದಲೇ ಕಾಡಿಗೆ ಕಿಚ್ಚಡರಿತು. ವೈಶ್ವಾನರನ ಹಸಿವು ನೀಗಿತು. ಇಂದ್ರನು ತನ್ನ ಪ್ರೀತಿಯ ವನವು ಬೆಂದು ಹೋಗುತ್ತಿರುವುದನ್ನು ಕಂಡು ಕೆರಳಿ ಅಗ್ನಿಯ ಅವಾಂತರವನ್ನು ಅಡಗಿಸುವ ಸಲುವಾಗಿ ಬಿರು ಮಳೆಯನ್ನು ಕರೆದನು. ಆದರೇನು? ಉಪೇಂದ್ರ ಭಕ್ತನ ಮುಂದೆ ಇಂದ್ರನ ಆಟ ಸಾಗಲಿಲ್ಲ. ಕೃಷ್ಣ ಕೃಪಾಪೋಷಿತರಿಗೆ ಶಕ್ಯವಲ್ಲದ್ದು ಯಾವುದು? ಅರ್ಜುನನು ಅಗ್ನಿದತ್ತವಾದ ಅಕ್ಷಯ ಶರಗಳಿಂದ ಒಂದು ದೊಡ್ಡ ತೆರೆಯನ್ನೇ ನಿರ್ಮಿಸಿ ಅಗ್ನಿಯ ಮೇಲೆ ಒಂದು ಹನಿ ಬೀಳದಂತೆ ಮಾಡಿದನು. ಸಂತುಷ್ಟನಾದ ಅಗ್ನಿದೇವನು ಅರ್ಜುನನನ್ನು ಹರಸಿ ಕೃಷ್ಣನಿಗೆ ನಮಸ್ಕಾರ ಮಾಡಿ ಅಂತರ್ಧಾನನಾದನು.

ಬಳಿಕ ಕೃಷ್ಣಾರ್ಜುನರು ತಮ್ಮ ಮೃಗಯಾ ವಿಹಾರವನ್ನು ಮುಗಿಸಿ ತಮ್ಮ ಪರಿವಾರದವರನ್ನು ಸೇರಿ ಅವರ ಜತೆಯಲ್ಲಿ ಇಂದ್ರಪ್ರಸ್ಥವನ್ನು ಸೇರಿದರು. ಅರ್ಜುನನ ಭಾಗ್ಯೋದಯವನ್ನು ಕಂಡು ಪಾಂಡವರು ಕೃಷ್ಣನನ್ನು ಭಕ್ತಿಯಿಂದ ಕೊಂಡಾಡಿದರು.

ಇದಾದ ಕೆಲವು ದಿನಗಳ ತರುವಾಯ ಶ್ರೀ ಕೃಷ್ಣನು ಪಾಂಡವರನ್ನು ಬೀಳ್ಕೊಂಡು ದ್ವಾರವತಿಯನ್ನು ಸೇರಿದನು.

## ಅಗ್ರಪೂಜೆ

ಕೃಷ್ಣನು ಒಂದು ದಿನ ಒಡ್ಡೋಲಗದಲ್ಲಿ ಕುಳಿತಿರುವಾಗ ಗಿರಿವ್ರಜ ಪಟ್ಟಣದಿಂದ ಒಬ್ಬ ದೂತನು ಬಂದು ನಮಸ್ಕರಿಸಿ ಓಲಗದ ವೈಭವವನ್ನು ನೋಡುತ್ತಾ ಸಂತೋಷ ಪಟ್ಟು ಅಚ್ಯುತನ ಕೃಪಾ ಕಟಾಕ್ಷವನ್ನು ನಿರೀಕ್ಷಿಸುತ್ತಿರಲು, ಕೃಷ್ಣನು "ನೀನು ಯಾರು? ಎಲ್ಲಿಂದ ಬಂದೆ? ನೀನು ಬಂದ ಬರವೇನು?" ಎಂದು ಬೆಸಗೊಂಡನು. ಆಗ ಅವನು ಕೃಷ್ಣನ ಪಾದ ಸನ್ನಿಧಿಯಲ್ಲಿ ತಾನು ತಂದಿದ್ದ ಪತ್ರವನ್ನು ಒಪ್ಪಿಸಿ "ಅಯ್ಯಾ, ನಾನು ಆ ಗಿರಿವ್ರಜ ಪಟ್ಟಣದಿಂದ ದೇವರ ಚರಣ ದರ್ಶನಕ್ಕಾಗಿ ಬಂದೆ. ಆ ಪಟ್ಟಣದಲ್ಲಿ ಮಾಗಧನ ಸೆರೆಗೆ ಸಿಕ್ಕಿರುವ ರಾಜರು ಈ ಪತ್ರವನ್ನು ನಿನಗೆ ಕಳುಹಿಸಿದ್ದಾರೆ." ಎಂದು ಹೇಳಿದನು. ಆಗ ಆರ್ತ ಸಂರಕ್ಷಕನಾದ ಕೃಷ್ಣನು ಆ ಪತ್ರವನ್ನು ತೆಗೆದು ಓದಿಕೊಂಡನು. "ಮಾಗಧನು ನಮ್ಮನ್ನು ಯುದ್ಧದಲ್ಲಿ ಸೋಲಿಸಿ

ಸೆರೆಯಲ್ಲಿಟ್ಟಿದ್ದಾನೆ. ಬಲಿಷ್ಠನಾದ ಇವನಿಗೆ ನಾವು ಸೋತೆವು. ನಮ್ಮ ಸಂಕಟಕ್ಕೆ ಬಿಡುಗಡೆ ಇಲ್ಲವಾಗಿದೆ. ನಿನ್ನ ಮರೆ ಹೊಕ್ಕಿದ್ದೇವೆ. ಕೃಷ್ಣ! ನಮಗೆ ನಿನ್ನ ಕರುಣಾವಲಂಬನ ಬೇಕು. ನಮ್ಮನ್ನು ಕಾಪಾಡು.'' ಹೀಗೆ ಬರೆದಿದ್ದ ಪತ್ರವನ್ನು ಓದಿಕೊಳ್ಳುತ್ತಿರುವಾಗ ನಾರದ ಮಹರ್ಷಿಯು ನಭದಿಂದ ಇಳಿದು ಯಾದವ ಸಭೆಯಲ್ಲಿ ವೈದೋರಿದನು. ಆ ಕೆಂಜೆಡೆಯ ನಾರದನ ಬರವನ್ನು ಕಂಡು ಕಂಜನಾಭನು ಕೈ ಮುಗಿದು ಸಭೆಯಿಂದೆದ್ದು ಹೋಗಿ ಇದಿರುಗೊಂಡು ಕರೆದು ತಂದು ನಿಜಪೀಠದಲ್ಲಿ ಕುಳ್ಳಿರಿಸಿವನು. ಸಭೆಯುವ ರೆಲ್ಲರೂ ನಮಸ್ಕರಿಸಿ ಗೌರವಿಸುತ್ತಿರುವಾಗ ಕೃಷ್ಣನು ನಾರದನನ್ನು ಕುರಿತು "ಸ್ವಾಮಿ, ತಮ್ಮಂತಹ ಮಹಾತ್ಮರು ಲೋಕ ಹಿತಾರ್ಥವಾಗಿ ಹೀಗೆ ಸಂಚರಿಸಿ ರುತ್ತಾರೆ, ನಿಮ್ಮ ದರ್ಶನ ನಮಗೆ ಭಾಗ್ಯ. ತಾವು ಪ್ರಪಂಚದ ವಿದ್ಯಮಾನ ವನ್ನು ಬಲ್ಲವರಾದುದರಿಂದ ಅಪ್ಪಣೆ ಕೊಡಿಸಬೇಕು'' ಎಂದು ನುಡಿದನು. ಕೃಷ್ಣನ ಈ ವಿನಯೋಕ್ತಿಗಳನ್ನು ಕೇಳಿ ನಸುನಗುತ್ತಾ "ಕೃಷ್ಣ ನಿನಗೆ ತಿಳಿ ಯದುದೇನಿದೆ? ಸಕಲ ಜೀವಾಧಾರ ಸಾಕ್ಷಿ ನೀನು. ಯಮನಂದನನು ರಾಜಸೂಯ ಯಾಗವನ್ನು ಕೈಗೊಂಡಿದ್ದಾನೆ. ರಾಜಸೂಯದ ವಿಷಯ ನಿನಗೆ ತಿಳಿದುದೇ ಅಲ್ಲವೆ? ಆದ್ದರಿಂದ ನೀನು ನಿನ್ನ ಭಕ್ತರಲ್ಲಿಗೆ ಬಿಜಯ ಮಾಡಬೇಕು. ನಿನ್ನನ್ನು ಕರೆಯುವುದಕ್ಕೋಸ್ಕರವೇ ನಾನು ಬಂದೆ'' ಎಂದು ಹೇಳಲು, ಕೃಷ್ಣನು ಸಭೆಯಲ್ಲಿದ್ದ ಉದ್ಧವನ ಮುಖವನ್ನು ನೋಡಲು ಆತನು ವಿನಯದಿಂದ ಹೀಗೆ ವಿಜ್ಞಾಪಿಸಿದನು. "ಸ್ವಾಮಿ, ಲಾಲಿಸಬೇಕು. ಮುನಿಯ ವಚನವು ಮೀರತಕ್ಕದ್ದಲ್ಲ. ಈ ದೂತನು ಬಂದು ಹೇಳಿದ ಮಾತೂ ತಾವು ಪರಿಪಾಲಿಸಬೇಕಾದುದೇ. ಈ ಎರಡರಿಂದ ನಿಮಗೆ ಅನುಪಮವಾದ ಕೀರ್ತಿ ಲಭಿಸುವುದು. ಮರೆಹೊಕ್ಕವರನ್ನು ಕಾಪಾಡುವುದು ರಾಜರಿಗೆ ಮುಖ್ಯ ಕರ್ತವ್ಯ. ಪಾಂಡವರು ಮಾಡುವ ಈ ಮಹಾಯಾಗವು ಈ ಶರಣಾಗತ ರಕ್ಷಣೆಗೆ ನಿಮಿತ್ತವಾಗುತ್ತವೆ. ಸಮಸ್ತರಾಜರನ್ನೂ ಗೆಲ್ಲದೆ ರಾಜಸೂಯವು ಸಿದ್ಧಿಸುವುದಿಲ್ಲ'' ಉದ್ಧವನ ಮಾತು ಎಲ್ಲರಿಗೂ ಒಪ್ಪಿಗೆಯಾಯಿತು. ಕೃಷ್ಣನು ಅದನ್ನು ಮನಸ್ಸಿಗೆ ತಂದುಕೊಂಡು ಸಾಗರೋಪಮವಾದ ಯಾದವ ಸೈನ್ಯವನ್ನು ಸಿದ್ಧಗೊಳಿಸಿದನು. ಆ ತರುವಾಯ ಗಿರಿವ್ರಜದ ದೂತನ ಮೂಲಕ ಅಲ್ಲಿದ್ದ ರಾಜ ಸಮೂಹಕ್ಕೆ ಧೈರ್ಯವನ್ನು ಹೇಳಿ

ಅವನನ್ನು ಕಳುಹಿಸಿ ರಥಾರೂಢನಾಗಿ ಯುಧಿಷ್ಠಿರನಲ್ಲಿಗೆ ಹೊರಟನು.

ದೂರದಿಂದಲೇ ಅಸುರಾಂತಕನ ಕನಕ ರಥವನ್ನು ನೋಡಿ ಪಾಂಡವರು ಹರ್ಷಗೊಂಡರು. ಆನಂದದಿಂದ ಕಣ್ಣೀರು ಗರೆದರು. ನೋಡ ನೋಡುತ್ತಿದ್ದ ಹಾಗೆಯೇ ಕೃಷ್ಣನ ರಥ ಹತ್ತಿರಕ್ಕೆ ಬಂತು. ಕೃಷ್ಣನು ರಥದಿಂದ ಇಳಿದು ಯುಧಿಷ್ಠರನಿಗೆ ನಮಸ್ಕರಿಸಿದನು. ಮುಕುಂದನನ್ನಪ್ಪಿದ ಯುಧಿಷ್ಠರಾದಿಗಳು ಪರಮ ಆಹ್ಲಾದದಲ್ಲಿ ಮುಳುಗಿ ಪ್ರಪಂಚವನ್ನೇ ಮರೆತರು. ಯಾಗಕ್ಕೆ ಬಂದ ಕೃಷ್ಣನ ಹೆಂಡಿರು ಮಕ್ಕಳನ್ನು ಧರ್ಮರಾಯನು ಸ್ವಾಗತಿಸಿ ಆಂದಣಗಳಲ್ಲಿ ಕೂಡಿಸಿ ಊರೊಳಕ್ಕೆ ಕಳುಹಿಸಿದನು. ಪುರಜನರ ಸಂಭ್ರಮದ ಸ್ವಾಗತವನ್ನು ಕೈಗೊಂಡ ಕೃಷ್ಣನು ಅರಮನೆಯನ್ನು ಹೊಕ್ಕನು. ಅರಮನೆಯಲ್ಲಿ ಕುಂತೀದೇವಿಯು ತನ್ನ ಸೋದರಳಿಯನಾದ ಕೃಷ್ಣನನ್ನು ಕಂಡು ಆಶೀರ್ವದಿಸಿದಳು. ದ್ರೌಪದಿ, ಸುಭದ್ರೆಯರು ಮತ್ತು ಇತರ ಅರಸಿಯರು ಬಂದು ಕೃಷ್ಣನಿಗೆ ವಂದಿಸಿದರು. ಕುಂತೀದೇವಿಯು ತನ್ನ ಸೊಸೆಯರೊಡನೆ ಕೃಷ್ಣನ ಹೆಂಡಿರ ಸಂಗಡ ಮಾತನಾಡುತ್ತಾ ಅವರನ್ನು ಉಪಚರಿಸಿದಳು. ಪಾಂಡವರ ಅರಮನೆ ಆನಂದ ಸಮುದ್ರವಾಯಿತು.

ಕುಂತೀ ನಂದನರ ಭಾಗ್ಯವನ್ನು ಏನೆಂದು ವರ್ಣಿಸೋಣ? ದೇವದೇವನಾದ ಕೃಷ್ಣನು ಅವರಿಗೆ ಪ್ರಿಯಬಾಂಧವನಾಗಿ ಬಂಧುಕೃತ್ಯಗಳನ್ನು ಮಾಡುತ್ತಿದ್ದಾನೆ. ದಿನ ದಿನವೂ ಪಾಂಡವರು ಹೊಸ ಹೊಸ ರೀತಿಯ ಭೋಜನ ವಸನ ಮಣಿಭೂಷಣಗಳಿಂದ ಯಾದವೋತ್ತಮರನ್ನು ಸತ್ಕರಿಸಿ ಸಂತೋಷಪಟ್ಟರು. ಎಷ್ಟು ಉಪಚರಿಸಿದರೂ ಯುಧಿಷ್ಠಿರನಿಗೆ ತೃಪ್ತಿಯಿಲ್ಲ. ಹಲವು ದಿನ ಹೀಗೆ ಕಳೆದವು. ಒಂದು ದಿನ ಅಖಿಳರಾಯರ ವೃಂದದ ಒಡ್ಡೋಲಗದಲ್ಲಿ ಕೃಷ್ಣನು ತನ್ನನ್ನು ಕರೆಸಿದ ಉದ್ದೇಶವೇನೆಂದು ಧರ್ಮರಾಯನನ್ನು ಪ್ರಶ್ನಿಸಿದನು. ಆಗ ಧರ್ಮರಾಯನು "ಕೃಷ್ಣ, ನಮ್ಮ ತಂದೆಗೆ ಇಂದ್ರನ ಓಲಗದಲ್ಲಿ ಮನ್ನಣೆ ಸಲ್ಲಬೇಕಾದರೆ ರಾಜಸೂಯಾಧ್ವರವನ್ನು ಮಾಡಬೇಕೆಂದು ನಾರದಮುನಿಯು ಹೇಳಿದುದರಿಂದ ನಾನು ಈ ಸಾಹಸವನ್ನು ಕೈಗೊಂಡಿದ್ದೇನೆ. ನೀನು ಕೃಪೆಮಾಡಬೇಕು. ನಿನ್ನ ಪಾದಭಕ್ತರಿಗೆ ಯಾವುದುತಾನೆ ಅಸಾಧ್ಯ? ನಿನ್ನ ಕೃಪೆಯೇ ನನ್ನ ಬಲ" ಎಂದು ನುಡಿ

ದನು. ಕೃಷ್ಣನು ನಸುನಗುತ್ತಾ ಧರ್ಮರಾಯನಿಗೆ ಧೈರ್ಯಹೇಳಿ ಸಮಸ್ತ ರಾಜರನ್ನು ಗೆಲ್ಲುವ ಸಲುವಾಗಿ ಆತನ ತಮ್ಮಂದಿರನ್ನು ನಾಲ್ಕು ದಿಕ್ಕುಗಳಿಗೂ ಕಳುಹಿಸಬೇಕೆಂದು ಸಲಹೆ ಹೇಳಿದನು. ಕೂಡಲೇ ಧರ್ಮರಾಯನು ತನ್ನ ತಮ್ಮಂದಿರನ್ನು ಕರೆಯಿಸಿ ಒಬ್ಬೊಬ್ಬರನ್ನು ಒಂದೊಂದು ದಿಕ್ಕಿಗೆ ಕಳುಹಿಸಿದನು. ಆಗ ಕೃಷ್ಣನು ಮಗಧ ನೃಪಾಲನನ್ನು ಗೆಲ್ಲಲು ಭೀಮಾರ್ಜುನರನ್ನು ಜೊತೆಯಲ್ಲಿ ಕರೆದುಕೊಂಡು ಗಿರಿವ್ರಜಕ್ಕೆ ಹೋಗಿ ಮಾಗಧನ ಅರಮನೆಯನ್ನು ಹಿಂಬಾಗಿಲಿನಿಂದ ಹೊಕ್ಕು ಅವನಲ್ಲಿ ಯುದ್ಧಭಿಕ್ಷೆಯನ್ನು ಬೇಡಿದನು. ಬಂದವರುಬೇರಾರೂ ಆಗದೆ ಕೃಷ್ಣಭೀಮಾರ್ಜುನರೆಂದರಿತು ಜರಾಸಂಧನು ಭೀಮನೊಡನೆ ಯುದ್ಧಮಾಡಿದನು. ಕೃಷ್ಣನ ಸಾನ್ನಿಧ್ಯಬಲದಿಂದ ಭೀಮನು ಜರಾಸಂಧನನ್ನು ಯುದ್ಧದಲ್ಲಿ ಕೊಂದನು. ಆ ತರುವಾಯ ಕೃಷ್ಣನು ಜರಾಸಂಧನ ಮಗನಾದ ಸಹದೇವನನ್ನು ಸಿಂಹಾಸನದ ಮೇಲೆ ಕೂರಿಸಿ ಅವನ ತಂದೆಯ ರಾಜ್ಯವನ್ನು ಅವನಿಗೆ ಕೊಟ್ಟು, ಆ ನಗರದಲ್ಲಿ ಸೆರೆಯಾಳುಗಳಾಗಿದ್ದ ರಾಜರನ್ನು ನೋಡುವ ಸಲುವಾಗಿ ಸೆರೆಮನೆಯನ್ನು ಪ್ರವೇಶಿಸಿದನು. ಬಾಡಿದ ನೈದಿಲೆಯ ವನಕ್ಕೆ ಚಂದ್ರನು ಮೂಡಿಬಂದ ಹಾಗಾಯಿತು ಕೃಷ್ಣನ ದರ್ಶನದಿಂದ ಆ ರಾಜರಿಗೆ ನಿರ್ಬಂಧದ ಕ್ಲೇಶ ಮರೆತುಹೋಯಿತು. ಆಷಾಢ ಕಾಲದ ವೃಷ್ಟಿ ಬಡನದಿಗಳಿಗೆ ಪುಷ್ಟಿಯನ್ನು ಕೊಡುವಹಾಗೆ ಕೃಷ್ಣನ ಬರವು ಆ ರಾಜರ ದೇಹದಲ್ಲಿ ಬಲವನ್ನು ಮೂಡಿಸಿತು. ಅವರು ಕೃಷ್ಣನಿಗೆ ಕೈಮುಗಿದು "ಕೃಪಾರ್ಣವನೇ, ದೇವತೆಗಳಿಗೂ ದುರ್ಲಭವಾದ ನಿನ್ನ ಪಾದಕಮಲವನ್ನು ಕಂಡು ನಾವು ಧನ್ಯರಾದೆವು. ಜರಾಸಂಧನು ನಮ್ಮನ್ನು ಸೆರೆಯಲ್ಲಿಟ್ಟು ದುಃಖಪಡಿಸಿದನಾದರೂ, ಆ ನಿಮಿತ್ತದಿಂದ ಈಗ ನಿನ್ನ ದರ್ಶನಭಾಗ್ಯ ಲಭಿಸಿತು." ಹೀಗೆ ನುಡಿದು ರಾಜರು ಕೃಷ್ಣನಿಗೆ ನಮಸ್ಕಾರಮಾಡಿದರು. ವಾಸುದೇವನು ಅವರ ಭಕ್ತಿಗೆ ಮೆಚ್ಚಿ ಅಭಯನೀಡಿ ಅವರನ್ನು ಉಪಚರಿಸುವಂತೆ ಸಹದೇವನಿಗೆ ಆಜ್ಞಾಪಿಸಿದನು. ಆ ತರುವಾಯ ಕೃಷ್ಣನು ಅವರನ್ನೆಲ್ಲ ಸೆರೆಯಿಂದ ಬಿಡಿಸಿ ಧರ್ಮರಾಯನ ರಾಜಸೂಯಕ್ಕೆ ನೆರವಾಗುವಂತೆ ಅಪ್ಪಣೆಮಾಡಿ ಕಳುಹಿಸಿಬಿಟ್ಟನು.

ಹೀಗೆ ಕೃಷ್ಣನು ಶರಣಾಗತ ರಕ್ಷಣೆಯನ್ನೂ ಪಾಂಡವರ ಕೆಲಸವನ್ನೂ

ನೆರವೇರಿಸಿಕೊಂಡು ಮಾಗಧನ ಅಪಾರಧನದೊಡನೆ ಇಂದ್ರಪ್ರಸ್ಥ ಪಟ್ಟಣಕ್ಕೆ ಹೊರಟನು. ಧರ್ಮರಾಯನ ರಾಜಧಾನಿಯನ್ನು ಸಮೀಪಿಸುತ್ತಿದ್ದ ಹಾಗೆಯೇ ಧರ್ಮರಾಯನ ಸಂದೇಹವನ್ನು ಪರಿಹರಿಸುವುದಕ್ಕೋಸ್ಕರ ತನ್ನ ಪಾಂಚಜನ್ಯವನ್ನು ರಭಸದಿಂದ ಮೊಳಗಿದನು. ಶಂಖಧ್ವನಿಯನ್ನು ಕೇಳಿ ಧರ್ಮರಾಯನೇ ಮೊದಲಾದವರು ಜರಾಸಂಧನ ಮರಣವಾಯಿ ತೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡರು. ಭೀಮಾರ್ಜುನರು ಕೃಷ್ಣ ಸಮೇತ ರಾಗಿ ಬಂದು ತಾವು ತಂದ ಅಪಾರವಾದ ದ್ರವ್ಯವನ್ನು ತೋರಿಸಿ, ಯಜ್ಞವು ಸಾಂಗವಾಗಿ ನಡೆಯಲೆಂದು ಹೇಳಿದರು. ಋತ್ವಿಜರು ಯಜ್ಞಭೂಮಿ ಯನ್ನು ಭಂಗಾರದ ನೇಗಿಲಿನಿಂದ ಉತ್ತರು. ಧರ್ಮರಾಯನು ವೇದೋಕ್ತ ರೀತಿಯಲ್ಲಿ ಯಜ್ಞದ ದೀಕ್ಷೆಯನ್ನು ವಹಿಸಿ ಹೋಮ ಹವನಾದಿಗಳನ್ನು ಸಾಂಗೋಪಾಂಗವಾಗಿ ನೇರವೇರಿಸಿದನು. ಯಜ್ಞದ ಸಮಸ್ತ ಸಂಭಾರ ಗಳನ್ನು ಒಟ್ಟುಗೂಡಿಸಿ ಸಮಸ್ತ ಅತಿಥಿಗಳನ್ನು ಬರಮಾಡಿಕೊಂಡು ಅವರನ್ನು ಆದರಿಸಿ ಯಜ್ಞವನ್ನು ಪೂರೈಸುವುದು ಸುಲಭದ ಕೆಲಸವಲ್ಲ. ವಿಭೂಷಣ ಗಂಧ ಮಾಲಾ ದಿವ್ಯಾಂಬರಾದಿಗಳನ್ನು ಕೊಡುವ ಅಧಿಕಾರ ದ್ರುಪದನದಾಗಿತ್ತು. ಕನಕಗೃಹದಧ್ಯಕ್ಷತೆಯನ್ನು ಧರ್ಮರಾಯನು ದುರ್ಯೋಧನನಿಗೊಪ್ಪಿಸಿದ್ದನು. ಸಭ್ಯರನ್ನು ಪೂಜಿಸುವ ಕೆಲಸ ಸಹ ದೇವನದಾಗಿತ್ತು. ಋಷಿಗಳ ಶಿಶ್ರೂಷೆ ಅರ್ಜುನನ ಕೆಲಸ. ಯಜ್ಞಕ್ಕೆ ಬಂದ ವಿಪ್ರವರರ ಕಾಲು ತೊಳೆಯುವ ಕೆಲಸ ಕೃಷ್ಣನ ಪಾಲಿಗೆ ಬಂದಿತು. ಎಲ್ಲರಿಗೂ ಸಮುಚಿತವಾದ ಆಸನಗಳನ್ನು ಒದಗಿಸುವ ಕೆಲಸ ಭೀಮಸೇನ ನಿಗೆ ಬಂದಿತ್ತು. ಹೀಗೆ ಯಜ್ಞಕಾರ್ಯವನ್ನು ಎಲ್ಲರೂ ಹಂಚಿಕೊಂಡು ರಾಜಸೂಯವನ್ನು ಬಹಳ ಯಶಸ್ವಿಯಾಗಿ ನಡೆಸಿದರು. ಧರ್ಮರಾಯನು ಯಜ್ಞದೀಕ್ಷಿತನಾಗಿ ಎಲ್ಲ ವೇದೋಕ್ತ ಕರ್ಮಗಳನ್ನು ನಡೆಸಿ ಚರಿತಾರ್ಥ ನಾದನು. ಧರ್ಮರಾಯನ ಯಜ್ಞದಲ್ಲಿ ಸಮಸ್ತ ರಾಜರೂ ದೇವತೆಗಳೂ ಮಾನವರೂ ಸಂತೃಪ್ತಿ ಪಡೆದರು. ಇನ್ನು ಯಜ್ಞಕ್ಕೆ ಬಂದ ಮಾನ್ಯರಿಗೆ ಉಡುಗೊರೆ ಮುಂತಾದುವುಗಳನ್ನು ಕೊಟ್ಟು ಕಳಿಸುವ ಕೆಲಸವಷ್ಟೇ ಮಿಕ್ಕಿತ್ತು. ಆದಕ್ಕೆ ಮೊದಲು ಅಗ್ರಪೂಜೆ ಯಾರಿಗೆ ಸಲ್ಲಿಸಬೇಕೆಂಬ ಸಮಸ್ಯೆ ಬಂತು. ಆ ಸಭೆಯಲ್ಲಿ ಸೇರಿದ್ದ ಸಮಸ್ತ ರಾಜರಲ್ಲಿ, ಋಷಿಗಳಲ್ಲಿ,

ಯಾರು ಅಗ್ರಪೂಜೆಗೆ ಅರ್ಹರೆಂದು ತೀರ್ಮಾನವಾಗಬೇಕಾಗಿತ್ತು. ಆ ಯಜ್ಞಕ್ಕೆ ಜೀವ ಸ್ವರೂಪನಾದ ಕೃಷ್ಣನಲ್ಲದೆ ಅಗ್ರಪೂಜೆಗಿನ್ನಾರೂ ಅರ್ಹರಲ್ಲ ವೆಂದು ಸಹದೇವನು ನುಡಿದನು. ಭೀಷ್ಮಾದಿಗಳು ಸಹದೇವನ ಈ ಅಭಿ ಪ್ರಾಯವನ್ನು ಪುಷ್ಟೀಕರಿಸಿದರು. ಆಗ ಧರ್ಮರಾಯನು ಕೃಷ್ಣನನ್ನು ಭದ್ರಾಸನದ ಮೇಲೆ ಕುಳ್ಳಿರಿಸಿ ಅವನ ಕಾಲು ತೊಳೆದು ಅರ್ಘ್ಯವನ್ನು ನೀಡಲು ಕೈ ಎತ್ತಿದನು. ಆ ಸಮಯದಲ್ಲಿ ಶಿಶುಪಾಲನು ಬಹಳ ಸಿಟ್ಟಿ ಗೆದ್ದು ಸಭೆಯಲ್ಲಿ ನಿಂತು " ಸಮಸ್ತ ಪೃಥ್ವೀಪಾಲರೂ ನೆರೆದಿರುವ ಈ ಸಭೆ ಯಲ್ಲಿ ಎಲ್ಲರನ್ನೂ ಬಿಟ್ಟು ಹೀನಕುಲಸಂಜಾತನೂ ಕ್ಷತ್ರಿಯ ಧರ್ಮ ವಿಹೀನನೂ ಆದ ಈ ಗೋಪಾಲಕನಿಗೆ ಅಗ್ರಪೂಜೆಯೇ? ಇದು ಸಮಸ್ತ ರಾಜಸಮೂಹಕ್ಕೂ ಮಾಡಿದ ಅಗೌರವ" ಎಂದು ಗರ್ಜಿಸಿದನು. ದೈತ್ಯನ ಈ ದುರುಕ್ತಿಗಳನ್ನು ಕೇಳಿ ಅಲ್ಲಿ ನೆರದಿದ್ದ ಸುರ ಮುನಿಜನಗಳೆಲ್ಲಾ ಅವನನ್ನು ಬಯ್ಯುತ್ತಿರಲು ಸಹದೇವನು ಬಹಳ ಮುಳಿದು "ಎಲವೋ ಗರ್ವಿತನೆ, ಶ್ವಾನನಂತೆ ಏಕೆ ಬೊಗಳುವೆ? ಕೃಷ್ಣನ ಅನುಪಮವಾದ ಮಹಿಮೆ ನಿನಗೆ ಹೇಗೆ ತಿಳಿಯಬೇಕು? ಜ್ಞಾನ, ಸಂಯಮ ವರತಪೋನು ಷ್ಠಾನವಂತರಿಗೇ ಅದು ಕಷ್ಟಸಾಧ್ಯವಾಗಿರುವಾಗ ಮಾಯಾ ಮೋಹಿತ ನಾದ ನಿನಗೆ ಅದು ಶಕ್ಯವೆ? ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದಕೃಷ್ಣ ನೊಡನೆ ನಿನಗೆ ಸೆಣಸಾಟವೇ? ಹುಲ್ಲಿಗೆ ಬೆಂಕಿಯೊಡನೆ ಸರಸವೇ? ಇಚ್ಛಾ ಮಾತ್ರದಿಂದ ಜಗತ್ತನ್ನು ಕೊಂದು ಮತ್ತೆ ಸೃಷ್ಟಿಸಬಲ್ಲ ಮುರಹರನನ್ನು ಯಾರೆಂದು ತಿಳಿದೆ?" ಎಂದು ಅಬ್ಬರಿಸಿದನು. ಇತ್ತ ಸಮಸ್ತ ಯಾದ ವರೂ ಶಿಶುಪಾಲನ ಮೇಲೆ ಕೆರಳಿ ಯುದ್ಧಕ್ಕೆ ಸಿದ್ಧರಾದರು. ಭೀಮಾರ್ಜು ನರಿಗಂತೂ ಶಿಶುಪಾಲನ ಮೇಲೆ ಮಿಗಿಲಾದ ಕೋಪವುಂಟಾಯಿತು. ಸಭೆ ಯಲ್ಲಿ ಬಹಳ ಕೋಲಾಹಲವಾಯಿತು. ಎಲ್ಲರೂ ಕತ್ತಿಯನ್ನು ಹಿರಿದರು. ಆದರೆ ಕೃಷ್ಣನು ಮಾತ್ರ ಮೌನದಿಂದಿದ್ದನು. ನಾಯಿ ಮತ್ಸರದಿಂದ ಬೊಗಳಿದರೆ ಮೃಗರಾಜನಾದ ಸಿಂಹವು ಬೊಗಳುವುದೇ? ನೀಚನ ದುರುಕ್ತಿ ಗಳನ್ನು ಕೇಳುತ್ತಾ ಯೋಗಿಗಳ ಕುಲದೈವವಾದ ಕೃಷ್ಣನು ಮೌನದಿಂದಿ ದ್ದನು. ಯಾದವ ಪಾಂಡವರ ಯುದ್ಧ ಸನ್ನಾಹವನ್ನು ನೋಡಿ ಶಿಶು ಪಾಲನು ಸಿಟ್ಟಾಗಿ ತನ್ನ ಕೆಲಬಲದ ರಾಯರನ್ನು ನೋಡಿ ಕಾಳಗಕ್ಕೆದ್ದನು.

ಅವನ ಜೊತೆಯಲ್ಲಿ ಕೆಲವು ರಾಜರು ಕೃಷ್ಣನ ಮೇಲೆ ಯುದ್ಧಕ್ಕೆ ಸಿದ್ಧರಾದರು. ಆಗ ಕೃಷ್ಣನು ಶಿಶುಪಾಲನ ಬೈಗಳನ್ನೆಲ್ಲ ಕೇಳಿ, ರೋಸಿ ಸುದರ್ಶನವನ್ನು ಕೈಲಿ ಹಿಡಿದು ಸಿಡಿಲಿನಂತೆ ಉರವಣಿಸುತ್ತಿದ್ದ ಆ ರಕ್ಕಸನ ಮೇಲೆ ಬೀಸಲು ಚಕ್ರಾಯುಧದ ಪೆಟ್ಟಿಗೆ ಶಿಶುಪಾಲನ ತಲೆ ನೆಲಕ್ಕೆ ಬಿದ್ದಿತು. ಅದನ್ನು ಕಂಡು ಅವನ ಬೆಂಬಲಿಗರಾಗಿದ್ದ ರಾಜರು, ಜೀವ ವಿನಾಶ ಭಯದಿಂದ ದಿಕ್ಕೆಟ್ಟು ಓಡಿದರು. ತರುವಾಯ ಧರ್ಮರಾಯನು ನಿರ್ವಿಘ್ನವಾಗಿ ಕೃಷ್ಣನಿಗೆ ಅಗ್ರಪೂಜೆಯನ್ನು ಸಲ್ಲಿಸಿ ನೆರದಿದ್ದ ರಾಜರನ್ನೆಲ್ಲಾ ಆದರಿಸಿ ಅವರಿಗೆ ಉಡುಗೊರೆಗಳನ್ನು ಕೊಟ್ಟು ಎಲ್ಲರನ್ನೂ ಸಂತುಷ್ಟಿಗೊಳಿಸಿದನು. ಕೌಸ್ತುಭಧಾರಿಯ ಕೃಪಾಪೋಷಿತರಾದವರಿಗೆ ಯಾವುದು ತಾನೇ ದುಸ್ಸಾಧ್ಯ?

## ಪಾರ್ಥಸಾರಥಿ

ಪಾಂಡವರು ವನವಾಸ ಅಜ್ಞಾತವಾಸಗಳನ್ನು ದಾಟಿ ಉಪಪ್ಲಾವ್ಯ ದಲ್ಲಿ ಸೇರಲು ಶ್ರೀ ಕೃಷ್ಣನು ಕೃತವರ್ಮ ಸಾತ್ಯಕಿ ಉದ್ಧವ ಮೊದಲಾದ ಯಾದವ ವೀರರನ್ನೆಲ್ಲಾ ಕರೆದುಕೊಂಡು ಪಾಂಡವರ ನೆರವಿಗೆ ಹೊರಟನು. ಪಾಂಡವರನ್ನು ಸೇರಿ ಅವರಿಗೆ ಬೇಕಾದ ಮಂತ್ರಾಲೋಚನೆಯನ್ನು ಹೇಳಿ ಧರ್ಮ ಸಂಸ್ಥಾಪಕನಾದ ಕೃಷ್ಣನು ಧರ್ಮರಾಯನ ಇಚ್ಛೆಯಂತೆ ಕೌರವರ ಬಳಿಗೆ ಶಾಂತಿಯ ದೂತನಾಗಿ ಹೊರಟನು. ಅಲ್ಲಿ ದುರ್ಯೋಧನನು ಕೃಷ್ಣನ ಹಿರಿಮೆಯನ್ನು ಅರಿಯದೆ ಮೂರ್ಖನಾಗಿ ಅವನನ್ನು ಕಟ್ಟಿ ಹಾಕಲು ಪ್ರಯತ್ನಿಸಿದನು. ಕರ್ಮಪಾಶಬದ್ಧರಿಗೆ ಯುಕ್ತಾಯುಕ್ತ ವಿವೇಚನೆ ಎಲ್ಲಿಂದ ಬರಬೇಕು! ಕೃಷ್ಣನನ್ನು ಕಟ್ಟುವುದು ಯಾರಿಗೆ ತಾನೇ ಸಾಧ್ಯ? ಆ ದನುಜಾಂತಕನು ತನ್ನ ವಿಶ್ವಸ್ವರೂಪವನ್ನು ಧರಿಸಿ ಕೌರವನ ಅನುಯಾಯಿಗಳನ್ನು ನೋಲಿಸಿದನು. ದುರ್ಯೋಧನನು ಅದರಿಂದ ಬುದ್ಧಿ ಕಲಿಯದೆ ಕೃಷ್ಣನ ಸಲಹೆಯನ್ನು ತಿರಸ್ಕರಿಸಿ ಯುದ್ಧಕ್ಕೇ ಮನವೊಲಿದನು. ಕೃಷ್ಣನು ದುರ್ಯೋಧನನನ್ನು ಜರೆದು ಪಾಂಡವರ ಬಳಿಗೆ ಹಿಂತಿರುಗಿ ಅವರ ಯುದ್ಧೋದ್ಯೋಗಕ್ಕೆ ನೆರವಾದನು. ಅನೇಕಾನೇಕ ರಾಜರು ಪಾಂಡವರ

ಕಡೆ ಯುದ್ಧಕ್ಕೆ ಬಂದು ಸೇರಿದರು. ಏಳು ಅಕ್ಷೋಹಿಣೀ ಸೈನ್ಯ ಸಿದ್ಧವಾಯಿತು. ಕೌರವನೂ ಅವರಂತೆಯೇ ಬಹಳ ದೊಡ್ಡ ಸೈನ್ಯವನ್ನು ಒಟ್ಟುಗೂಡಿಸಿದನು. ಕುರುಕ್ಷೇತ್ರ ಸೈನ್ಯಮಯವಾಯಿತು. ಧರ್ಮರಾಯನು ಕೃಷ್ಣನನ್ನು ಮುಂದಿಟ್ಟುಕೊಂಡು ತಮ್ಮಂದಿರೊಡನೆ ಯುದ್ಧ ಕಾರ್ಯಕ್ಕೆ ಹೊರಟನು. ಭಯಂಕರವಾದ ನರಹತ್ಯೆ ಅಖಂಡವಾಗಿ ಸಾಗತೊಡಗಿತು. ಅರ್ಜುನನು ತನ್ನ ಪ್ರತಿ ಪಕ್ಷದಲ್ಲಿ ತನ್ನ ಅನೇಕ ಪ್ರಿಯ ಬಂಧುಗಳು ಗುರುವು ಎಲ್ಲರೂ ನಿಂತಿದ್ದುದನ್ನು ನೋಡಿ ಅವರನ್ನು ಕೊಲ್ಲಲೊಲ್ಲದೆ ಧನುಸ್ಸನ್ನು ಕೆಳಗಿಳಿಸಿ ಶೋಕ ಮೂರ್ಛಿತನಾಗಲು ಕೃಷ್ಣನು ಅವನಿಗೆ ಧೈರ್ಯ ಹೇಳಿ ವಿವೇಕವನ್ನು ಬೋಧಿಸಿದನು. ಆತ್ಮ ಸ್ವರೂಪವನ್ನು ತಿಳಿಯ ಹೇಳಿ ಅವನ ಶೋಕ ಮೋಹಗಳನ್ನು ಕಳೆದು ತತ್ವೋಪದೇಶ ಮಾಡಿ ಯುದ್ಧಕ್ಕೆ ಪ್ರೇರಿಸಿದನು. ಅರ್ಜುನನು ತನ್ನ ಅಧೈರ್ಯವನ್ನು ಬಿಟ್ಟು ಗಾಂಡಿವವನ್ನು ಹಿಡಿದು ಕ್ರೂರವಾಗಿ ಯುದ್ಧಮಾಡತೊಡಗಿದನು. ಈ ಉಭಯ ಸೈನ್ಯಗಳೂ ಹೀಗೆ ಹೋರಾಡುವುದನ್ನು ನೋಡಿ ಬಲರಾಮನು ಬಂಧುವಧೆಯನ್ನು ನೋಡಲಾರದೆ, ಕೃಷ್ಣನ ಸಂಗಡ ಕಾದಲೂ ಆರದೆ ತೀರ್ಥಯಾತ್ರೆಗೆ ಹೋದನು. ಮೊದಲ ಹತ್ತು ದಿನ ಭೀಷ್ಮನು ಕೌರವ ಸೈನ್ಯಕ್ಕೆ ಅಧಿಪತಿಯಾಗಿ ಯುದ್ಧ ಕಾರ್ಯವನ್ನು ನಡೆಸಿ ಶರಶಯ್ಯೆಯಲ್ಲಿ ಮಲಗಿದನು.

ಭೀಷ್ಮರು ಶರಶಯನವನ್ನೇರಿದ ಮೇಲೆ ದುರ್ಯೋಧನನು ತನ್ನ ಸೈನ್ಯಕ್ಕೆ ದ್ರೋಣಾಚಾರ್ಯರನ್ನು ಅಧಿಪತಿಯನ್ನಾಗಿ ಮಾಡಿದನು. ಆತನು ಬಹಳ ರೋಷದಿಂದ ಯುದ್ಧಮಾಡಿ "ನಾಳೆ ಪಾಂಡವರನ್ನು ಕೊಂದು ತೀರುವೆ"ನೆಂದು ಹೊರಟನಾದರೂ ಕೃಷ್ಣನ ತಂತ್ರದಿಂದ ಶರಸನ್ಯಾಸ ಮಾಡಿ ಸ್ವರ್ಗಕ್ಕೆ ಹೋದನು. ಈ ಮಧ್ಯೆ ಅಭಿಮನ್ಯುವು ಜಯದ್ರಥನ ಕೈಯಲ್ಲಿ ಸಾಯಲು ಅವನನ್ನು ಮಾರನೆಯ ದಿನ ಕೊಲ್ಲುವುದಾಗಿ ಅರ್ಜುನನು ಶಪಥಮಾಡಿ ಅದನ್ನು ಸಾಧಿಸಿಕೊಂಡನು. ಆ ಮೇಲೆ ಕೌರವರ ಕಡೆ ಕರ್ಣನು ಸೇನಾಧಿಪತಿಯಾಗಿ ಬಹಳ ಜಿದ್ದಿನಿಂದ ಯುದ್ಧಮಾಡಿದನಾದರೂ ಕೃಷ್ಣಾರ್ಜುನರ ತಂತ್ರದ ಮುಂದೆ ಅವನ ಕೈ ಸಾಗಲಿಲ್ಲ. ಪರಶುರಾಮನ ಶಾಪ ಮುಂತಾದ ಹಲವು ಕಾರಣಗಳಿಂದ ಕರ್ಣನು ಹತನಾದನು. ಆ

ಮೇಲೆ ಯುಧಿಷ್ಠಿರನು ಶಲ್ಯನನ್ನು ಕೊಂದನು. ಭೀಮ ದುರ್ಯೋಧನರ ದುರ್ಧರವಾದ ಗದಾಯುದ್ಧವು ನಡೆದು ದುರ್ಯೋಧನನು ಊರುಭಂಗ ಕಿರೀಟ ಭಂಗಗಳನ್ನು ಹೊಂದಿ ಮೃತನಾದನು. ಯುದ್ಧ ನಿಂತಿತು. ಬಳಿಕ ಮುರರಿಪುವು ಧೃತರಾಷ್ಟ್ರ ಗಾಂಧಾರಿಯರಿಗೆ ಸಮಾಧಾನ ಹೇಳಿ ಅವರನ್ನು ಭಕ್ತಿಯಿಂದ ಸೇವಿಸುವಂತೆ ಪಾಂಡವರಿಗೆ ತಿಳಿಸಿ ಅವರನ್ನು ಹಸ್ತಿನಾವತಿಯ ರಾಜ್ಯದಲ್ಲಿ ಸ್ಥಾಪಿಸಿ ದ್ವಾರಕಿಗೆ ಹಿಂತಿರುಗಿದನು. ಪಾಂಡವರ ವಿಜಯ ವಾರ್ತೆಯನ್ನು ತಿಳಿಸಿ ವಸುದೇವಾದಿಗಳ ಕಿವಿಗಳಿಗೆ ಹಬ್ಬಗಳನ್ನು ಮಾಡಿ ಕೃಷ್ಣನು ಬಂಧುಗಳೊಡನೆ ಸುಖಸಂತೋಷದಲ್ಲಿ ಇದ್ದು ಬಿಟ್ಟನು. ಧರೆಯ ದುಷ್ಟಕ್ಷತ್ರಿಯರ ವಧೆಮಾಡಿ ಭೂಭಾರಹರಣ ಕಾರ್ಯದಲ್ಲಿ ಕೃತ ಕಾರ್ಯನಾದುದರಿಂದ ಕೃಷ್ಣನು ವಿಶ್ರಾಂತಿಸುಖವನ್ನು ಅನುಭವಿಸಿದನು. ಹಲವು ವರ್ಷಗಳು ಹೀಗೆ ಆನಂದದಿಂದ ಕಳೆದವು. ಕೃಷ್ಣನು ತನ್ನ ಹೆಂಡಿರು ಮಕ್ಕಳು ಮೊಮ್ಮಕ್ಕಳು ಮುಂತಾದವರೊಡನೆ ವೈಭವದಿಂದ ಬದುಕಿದನು.

## ಬಾಲ್ಯಸ್ನೇಹಿತ

ಕೃಷ್ಣನು ಗುರುಕುಲವಾಸದಲ್ಲಿದ್ದಾಗ ಅವನ ಒಡನಾಡಿಯಾಗಿದ್ದ ಸುದಾಮನೆಂಬ ವಿಪ್ರನು ಆತ್ಮಜ್ಞಾನಿಯಾಗಿ ವೇದವೇದಾಂತಗಳನ್ನು ಅರಿತು ಸಮಸ್ತಗುಣ ನಿಲಯನಾಗಿದ್ದನು. ಆದರೆ ಅವನಿಗೆ ಲಕ್ಷ್ಮಿಯು ಒಲಿಯಲಿಲ್ಲ. ಬಹುಸಂತತಿಯಿಂದ ಪೀಡಿತನಾದ ಈ ದರಿದ್ರನು ಜೀವವನ್ನು ಬಹಳ ಕಷ್ಟ ದಿಂದ ನೀಸುತ್ತಿದ್ದನು. ಎಲ್ಲ ಭಾರವನ್ನೂ ಪರಮೇಶ್ವರನಲ್ಲಿ ಹಾಕಿ ಗೃಹಸ್ಥ ಧರ್ಮವನ್ನು ಹೇಗೋ ನಡೆಸುತ್ತಿದ್ದನು. ಹೀಗಿರಲು ಒಂದು ದಿನ ಅವನ ಹೆಂಡತಿಯು, ಕೃಷ್ಣನನ್ನೇಕೆ ನೋಡಿಬರಬಾರದೆಂದು ಕೇಳಿದಳು. "ಕೃಷ್ಣ ನೆಂಬ ಹೆಸರಿನಲ್ಲಿ ಸಾಕ್ಷಾತ್ ಲಕ್ಷ್ಮೀಕಾಂತನೇ ನಿಮ್ಮ ಸ್ನೇಹಿತನಾಗಿರು ವಾಗ ನಮಗೆ ಈ ದಾರಿದ್ರ್ಯವೇಕೆ? ಆತನನ್ನು ನೀವು ಹೋಗಿ ಬೇಡಬಾರದೇ? ಒಂದುಸಲ ಆತನನ್ನು ಮರೆತು ಧ್ಯಾನಿಸಿದರೂ ತನ್ನನ್ನೇ ಕೊಡುವನೆಂದು ಲೋಕವೆಲ್ಲ ಹೇಳುತ್ತಿರಬೇಕಾದರೆ ನಮ್ಮಂಥ ಧನವಿಹೀನ

ರಿಗೆ ಧನವನ್ನು ಕರುಣಿಸಲಾರನೇ ?'' ಎಂದು ಪದೇ ಪದೇ ಹೇಳುತ್ತಿದ್ದ ಆಕೆಯ ಮಾತನ್ನು ಅಂದು ಗಮನಿಸಿ ಆತನು ಕೃಷ್ಣದರ್ಶನಕ್ಕೆ ಹೊರಡಲು ನಿರ್ಧರಿಸಿದನು. ಮಿತ್ರ ದರ್ಶನಕ್ಕೆ ಹೋಗುವಾಗ ಬರಿಗೈಯಲ್ಲಿ ಹೋಗ ಲಾಗದು. ಆದರೆ ಜನ್ಮ ದರಿದ್ರನಾದ ತಾನು ಏನು ಉಪಾಯನವನ್ನು ತೆಗೆದು ಕೊಂಡು ಹೋಗಬಹುದು? ಅವನ ಮನಸ್ಸಿನಲ್ಲಿ ಈ ಯೋಚನೆ ಬರುವ ವೇಳೆಗೆ ಆತನ ಹೆಂಡತಿಯು ನಾಲ್ಕು ಹಿಡಿ ಅವಲಕ್ಕಿಯನ್ನು ತಂದು ಕೊಟ್ಟಳು. ಆ ಪರಮ ಭಾಗವತನು ಅದನ್ನು ತನ್ನ ಹರುಕು ಬಟ್ಟೆಯಲ್ಲಿ ಕಟ್ಟಿಕೊಂಡು ಪರಮ ಪುರುಷನ ಪಾದದರ್ಶನಕ್ಕೆ ಹೊರಟನು. ತನಗೆ ಧನ ಲಾಭವಾದರೂ ಆಗದಿದ್ದರೂ ಈ ನೆವದಿಂದ ತನಗೆ ಭಗವದ್ದರ್ಶನವಾಗು ವುದಲ್ಲಾ ಎಂಬುದಿಷ್ಟೇ ಆತನ ಸಂತೋಷ. ಪರಮಭಕ್ತಿಯಿಂದ ಆತನು ಕೃಷ್ಣದರ್ಶನಕ್ಕಾಗಿ ದಾರಿ ನಡೆದು ಹೊರಟನು.

ಕುಚೇಲನು ದ್ವಾರವತಿಯ ಅರಮನೆಯ ಮಹಾದ್ವಾರದ ಬಳಿಗೆ ಬಂದು ಕೃಷ್ಣನ ದರ್ಶನಕ್ಕಾಗಿ ಕಾದು ದೂತನ ಕೈಲಿ ಹೇಳಿಕಳುಹಿಸಿದನು. ದೂರದಿಂದಲೇ ಕುಚೇಲನ ಆಗಮನವನ್ನು ಕಂಡಿದ್ದ ಶ್ರೀಕೃಷ್ಣನು ದೂತರು ಹೇಳುವುದಕ್ಕಿಂತ ಮುಂಚೆಯೇ ಓಡಿಬಂದು ಮಿತ್ರನನ್ನಾಲಿಂಗಿಸಿಕೊಂಡು ಕುಶಲಪ್ರಶ್ನೆಮಾಡಿ ಅಂತಃಪುರಕ್ಕೆ ಕರೆದುಕೊಂಡು ಹೋದನು.

ಅರಮನೆಯ ಬಾಗಿಲಲ್ಲಿ ಕೃಷ್ಣದರ್ಶನ ಕುತೂಹಲದಿಂದ ಕಾದಿದ್ದ ರಾಜರನೇಕರಿದ್ದರು. ಅನೇಕ ಮಂಡಲೇಶ್ವರರೂ ದೇವತೆಗಳೂ ಋಷಿ ಗಳೂ ಕೃಷ್ಣನನ್ನೀಕ್ಷಿಸುತ್ತಾ ಕುಳಿತಿದ್ದರು. ಅವರನ್ನೆಲ್ಲ ನೋಡುತ್ತ ಕುಚೇಲನು ಕೃಷ್ಣನ ಜೊತೆಯಲ್ಲಿ ಅರಮನೆಯ ಒಳಭಾಗವನ್ನು ಹೊಕ್ಕನು. ಅಲ್ಲಿ ಶ್ರೀಕೃಷ್ಣನು ತನ್ನ ಸ್ನೇಹಿತನನ್ನು ಮಂಚದ ಮೇಲೆ ಕೂಡಿಸಿ ಆ ಬ್ರಾಹ್ಮಣನ ಕಾಲುಗಳನ್ನು ತನ್ನ ಕೈಯಿಂದಲೇ ತೊಳೆದು ಗೌರವಿಸಿದನು. ಲಕ್ಷ್ಮೀವಲ್ಲಭನ ಈ ಲೀಲೆಯನ್ನು ಕಂಡು ಎಲ್ಲರೂ ಬೆರಗಾದರು. ಅನಂತರ ಕೃಷ್ಣನು ಕುಚೇಲನಿಗೆ ಸ್ನಾನಮಾಡಿಸಿ ಶುಭ್ರವಸ್ತ್ರಗಳನ್ನು ಕೊಟ್ಟು ಅನೇಕ ತೊಡಿಗೆಗಳನ್ನು ತಾನೇ ಕೈಯಿಂದ ತೊಡಿಸಿದನು. ಭೋಜನಮಾಡಿಸಿ ಆ ಕೃಶಾಂಗನನ್ನು ಜೊತೆಯಲ್ಲಿ ಕೂಡಿಸಿಕೊಂಡು ಕೃಷ್ಣನು ಅವನ ಕುಶಲವಾರ್ತೆ ಯನ್ನು ಕೇಳಿ ಮನ್ನಿಸುತ್ತಿರಲು ದೇವಿಯರು ಚಾಮರದಿಂದ ಬೀಸುತ್ತಿದ್ದರು.

ಕುಚೇಲನು ಯಾವ ಸುಕೃತವನ್ನು ಮಾಡಿದ್ದನೋ! ಅಥವಾ ಪೂರ್ವಜನ್ಮ ದಲ್ಲಿ ಏನು ತಪಸನ್ನಾಚರಿಸಿದ್ದನೋ! ಯಾವ ಋಷಿಗಳಿಗೂ ಸಿಕ್ಕದ ಭಾಗ್ಯ ಅವನಿಗೆ ಲಭಿಸಿತು. ಕೃಷ್ಣನ ಈ ಅತಿಶಯವಾದ ಸತ್ಕಾರದಿಂದ ಕುಚೇಲನು ಪರಮಹರ್ಷಗೊಂಡನು. ಆ ಸಂತೋಷಾತಿಶಯದಲ್ಲಿ ಅವನು ಊರಿನಿಂದ ಹೊರಟ ಸಂಕಲ್ಪವನ್ನೇ ಮರೆತು ಬಿಟ್ಟನು. ದೀನನಾದ ತನ್ನನ್ನು ಇಷ್ಟು ಗೌರವದಿಂದ ಕಂಡ ಲಕ್ಷ್ಮೀವಲ್ಲಭನ ನಿಗರ್ವಶೀಲತೆಯನ್ನು ಮನದಲ್ಲಿ ಮೆಚ್ಚಿಕೊಂಡನು. ಕೃಷ್ಣನು ಕುಚೇಲನನ್ನು ವಿಶೇಷವಾಗಿ ಸತ್ಕರಿಸಿ ಸಿರಿಮಂಚದಲ್ಲಿ ಕುಳ್ಳಿರಿಸಿಕ್ಕೊಂಡು "ಮಿತ್ರನೇ, ಹಿಂದೆ ನಾವು ಗುರುಕುಲದಲ್ಲಿ ಒಂದಾಗಿ ಕಲಿತ ದಿನಗಳು ನಿನಗೆ ನೆನಪಿದೆಯೋ? ಆ ಸ್ನೇಹವನ್ನು ನೀನು ಮರೆಯಲಿಲ್ಲವಷ್ಟೆ? ಗುರುದಕ್ಷಿಣೆಯನ್ನು ಕೊಟ್ಟು ಹೊರಟುಬಂದಮೇಲೆ ನೀನು ಮದುವೆಯಾದೆಯಾ? ನಿನಗೆ ಅನುಕೂಲಳಾದ ಹೆಂಡತಿ ಲಭಿಸಿರುವಳೇ? ನಿನಗೆ ಮಕ್ಕಳಾದುವೆ? ಅಥವಾ ಗೃಹಸ್ಥಾಶ್ರಮದಲ್ಲಿ ಇಷ್ಟವಿಲ್ಲದೆ ವೈರಾಗ್ಯದಲ್ಲಿ ಮನಸ್ಸಿಟ್ಟೆಯೋ?" ಎಂದು ಕೇಳಿ ಕುಚೇಲನ ವೃತ್ತಾಂತವನ್ನೆಲ್ಲಾ ತಿಳಿದುಕೊಂಡನು. ಆ ಮೇಲೆ ಬಹಳ ಹೊತ್ತು ಕೃಷ್ಣ ಕುಚೇಲರು ತಮ್ಮ ಗುರುಕುಲವಾಸದ ಸಂಗತಿಗಳನ್ನು ನೆನಸಿಕೊಂಡರು. ಗುರುವಿನ ಹೆಂಡತಿಯ ಆಜ್ಞೆಯ ಪ್ರಕಾರ ಒಂದು ದಿನ ಅವರು ಸೌದೆಯನ್ನು ತರಲು ಅಡವಿಗೆ ಹೋಗಿದ್ದಾಗ ಬಿರುಸಾದ ಮಳೆ ಬಂದು ಸಿಡಿಲು ಮಿಂಚುಗಳ ಅಬ್ಬರ ಹೆಚ್ಚಾಗಿ ಕತ್ತಲೆ ಕವಿದುಕೊಳ್ಳಲು ಕಾಡಿನಲ್ಲಿ ದಾರಿತಪ್ಪಿ ಗುರುವಿನ ಮನೆಗೆ ಬರಲಾಗದೆ ಬೆಳಗಾಗುವ ತನಕ ಒಬ್ಬರನೊಬ್ಬರು ತಬ್ಬಿಕೊಂಡು ಹೊತ್ತು ಕಳೆದುದನ್ನು ಸ್ಮರಿಸಿ ಕೊಂಡರು. ಬೆಳಗಾಗುವ ವೇಳೆಗೆ ಗುರುವಾದ ಸಾಂದೀಪಿನಿಯು ಶಿಷ್ಯರೇನಾದರೋ ಎಂದು ಕಳವಳಿಸುತ್ತಾ ಅಡವಿಯೆಲ್ಲ ಸುತ್ತಿ ತಾವಿದ್ದ ಬಳಿಗೆ ಬಂದು, ಜೀವ ದಿಂದಿದ್ದುದನ್ನು ಕಂಡು ಆತನು ಸಂತೋಷದಿಂದ ಮುಳುಗಿಹೋದದ್ದು; "ಆಯುಷ್ಯವಂತರಾಗಿ, ಸಕಲವಿದ್ಯೆಗಳನ್ನೂ ಬಲ್ಲವರಾಗಿ, ನಿಮಗೆ ಲಕ್ಷ್ಮೀವಲ್ಲಭನ ಕೃಪೆಯಾಗಲಿ, ನಿಮಗೆ ಇಹಪರಗಳಲ್ಲಿ ಸದ್ಗತಿಯಾಗಲಿ" ಎಂದು ಪ್ರೀತಿಯಿಂದ ಹರಸಿದುದು ಮುಂತಾದ ಹಲವು ಘಟನೆಗಳನ್ನು ಸ್ಮರಿಸಿ ಕೊಂಡು ಕೃಷ್ಣನು "ಭೂಸುರೋತ್ತಮ, ಕೇಳು, ಗುರುಶುಶ್ರೂಷೆಯಿಂದಲ್ಲದೆ

ಮುಕ್ತಿಗೆ ಬೇರೊಂದು ಮಾರ್ಗವನ್ನು ಕಾಣೆ. ಸೂರ್ಯನಿಂದಲ್ಲದೆ ಕತ್ತಲೆ ನಾಶವಾಗುವುದೇ ? '' ಎಂದು ಹೇಳಿದನು. ಆಗ ಕುಚೇಲನು ಕೃಷ್ಣನ ಕಮನೀಯ ಮೂರ್ತಿಯನ್ನು ಕಣ್ದಣಿಯೆ ನೋಡಿ ''ಅಯ್ಯಾ, ಆನಂದನಿಧಿಯಾದ ನಿನ್ನೊಡನೆ ಗುರುಕುಲ ಮಂದಿರದ ಸಹವಾಸ ದೊರೆತ ನನಗೆ ಇಹಪರಗಳಲ್ಲಿ ಯಾವುದು ತಾನೇ ಅಸಾಧ್ಯ? ಅರಿಯದ ಅಜ್ಞಾನಿಗಳಿಗೆ ಆತ್ಮತತ್ವವನ್ನು ಅರುಹಿಸಲು ನಾನಾಸ್ವರೂಪಗಳನ್ನು ಸ್ಮರಿಸಿ ನಿರ್ಮಲ ಸತ್ವಗುಣದಿಂದ ಮೆರೆಯುವ ನಿನ್ನ ಪಾದ ಸನ್ನಿಧಿಯನ್ನು ಸೇರಿದ್ದೇನೆ. ಕರುಣಾಕರನೇ ನೀನೆನಗೆ ಶರಣಾಗು '' ಎಂದು ನುಡಿದು ನಮಸ್ಕರಿಸಿದನು. ಆಗ ಭಕ್ತ ಕುಟುಂಬಿಯಾದ ಕೃಷ್ಣನು ಕುಚೇಲನೊಡನೆ ಸರಸವಾಡುತ್ತಾ " ಸಖನೇ ಸುಖದಿಂದ ಕುಳ್ಳಿರು. ನೀನು ನನಗೆ ನಮಸ್ಕರಿಸಿದರೆ ಹೊಟ್ಟೆ ತುಂಬಿತೆ? ನಿನ್ನ ಈ ಮಾತಿನ ಅಂಗಡಿ ಸಾಕು. ನನಗೆ ನೀನೇನು ಉಪಾಯನವನ್ನು ತಂದಿರುವೆ? ಹೇಳು ಹೇಳು. ನಾಚಬೇಡ. ನೀನು ತಂದದ್ದು ಏನೇ ಆಗಲಿ, ಎಷ್ಟೇ ಆಗಲಿ ಸಂಕೋಚಪಡಬೇಡ." ಎಂದು ನುಡಿದನು. ಕುಚೇಲನು ನಾಚಿ ಕೊಳ್ಳುತ್ತಿರಲು, ಕೃಷ್ಣನು ಮತ್ತೆ '' ಒಂದು ಬೊಗಸೆ ನೀರು, ಒಂದು ಹೂ, ಅಥವಾ ಒಂದು ಹಣ್ಣು ಎಂಬಿಷ್ಟರಲ್ಲೇ ನಾನು ತೃಪ್ತನಾಗಿ ಭಕ್ತರ ಭಕುತಿಯನ್ನು ಮೆಚ್ಚುತ್ತೇನೆ. ದೊಡ್ಡದು ಚಿಕ್ಕದೆಂದು ಎಣಿಸಬೇಡ. ನೀನು ಮನಃಪೂರ್ವಕವಾಗಿ ಕೊಟ್ಟದ್ದು ನನಗೊಂದು ಮೇರು ಪರ್ವತವಿದ್ದ ಹಾಗೆ. ನಾನು ಬಹಳ ಬಯಸುವವನಲ್ಲ. ನಿನ್ನಲ್ಲಿ ಇರುವುದನ್ನು ಕೊಡು.'' ಎಂದು ಮತ್ತೆ ಒತ್ತಾಯ ಮಾಡಿದನು. ಕುಚೇಲನು ಭಾಗ್ಯಮೂರುತಿಯಾದ ಈ ಪುಣ್ಯಶಾಲಿಗೆ ತಾನು ತಂದ ಆ ಅವಲಕ್ಕಿಯನ್ನು ಹೇಗೆಕೊಡುವುದೆಂದು ಹಿಂತೆಗೆಯುತ್ತಿದ್ದನು. ಆಗ ಕೃಷ್ಣನು ಅವನ ಕಂಕುಳಲ್ಲಿದ್ದ ಮೂಟೆಯನ್ನು ತೆಗೆದುಕೊಂಡು ಅದನ್ನು ಬಿಚ್ಚಿ ಅದರಲ್ಲಿದ್ದ ಅವಲಕ್ಕಿಯನ್ನು ನೋಡಿದನು. "ಇಷ್ಟೊಂದು ಅವಲಕ್ಕಿ ಇರುವಾಗ ನೀನು ಹೀಗೆ ನಾಚಬಹುದೇ? ಇದು ನನಗೂ ಈ ಮನೆಯ ಮಕ್ಕಳಿಗೂ ಸಾಕಾಗುವಷ್ಟು ಇದೆ. ಸುಧಾಮ, ನೀನು ನನ್ನ ಮನಸ್ಸಿನ ರೀತಿಯನ್ನರಿಯದೆ ವೃಥಾ ಸಂಕೋಚಪಟ್ಟೆ." ಎಂದು ಹೇಳುತ್ತಾ ಆ ಅವಲಕ್ಕಿಯನ್ನು ಕೈಯಿಂದ ತೆಗೆದು ಬಾಯಿಗೆ ಹಾಕಿಕೊಂಡನು,

ಒಂದು ಹಿಡಿಯಷ್ಟು ಅವಲಕ್ಕಿಯನ್ನು ಮೆದ್ದು ಇನ್ನೊಂದು ಮುಷ್ಟಿಯಷ್ಟು ಮೆಲ್ಲುವೆನೆಂದು ಕೈಗೆ ತೆಗೆದುಕೊಳ್ಳಲು ಆಗ ರುಕ್ಮಿಣೀದೇವಿಯು ಬಂದು ಗಂಡನ ಕೈ ತಡೆದಳು. "ಆತ್ಮತುಷ್ಟನಿಗೆ ಇಷ್ಟೊಂದು ಚಾಪಲ್ಯವೇಕೆ? ನಿನ್ನ ಈ ಏಕಮುಷ್ಟಿ ಗ್ರಾಸವೇ ಸಾಲದೆ? ನನ್ನನ್ನು ಈ ಮಹೀಸುರನಿಗೆ ಮಾರದಿರು. ಭಕ್ತರ ಮೇಲಿನ ಪ್ರೇಮಕ್ಕೆ ನನ್ನನ್ನು ಅನಾದರಣೆ ಮಾಡ ಬೇಡ" ಎಂದು ನುಡಿದಳು. ಕೃಷ್ಣನು "ಮರುಳು ಹೆಂಗಸೇ ವೃಥಾ ಈ ಬ್ರಾಹ್ಮಣನನ್ನು ಹಿಂಸೆಪಡಿಸಿದೆ. ಅವನ ದಾರಿದ್ರ್ಯದುಃಖ ಮೇರೆ ಇಲ್ಲದುದಾಗಿದೆ. ನನ್ನ ಭಕ್ತರು ನಿನಗೆ ಎರವಿಗರೆ? ಕೈ ಬಿಡು." ಎಂದು ಬಹಳ ಕೋಪದಿಂದ ಹೆಂಡತಿಯನ್ನು ತಿರಸ್ಕರಿಸುವ ಹಾಗೆ ಮಾತನಾಡಿ ದನು. ತನ್ನ ಭಕ್ತರಿಗೆ ಮಾಡುವ ಸೇವೆಯೇ ಕೃಷ್ಣನಿಗೆ ಸಲ್ಲಿಸುವ ಸೇವೆ. ಬೇರೆ ಪೂಜೆ ಆತನಿಗೆ ಆವಶ್ಯಕವಿಲ್ಲ. ಆತನ ಒಲವನ್ನು ಪಡೆಯ ಬೇಕಾದರೆ ಆತನ ಏಕಾಂತ ಭಕ್ತರನ್ನು ಭಜಿಸಬೇಕು. ಭಗವಂತನು ಭಕ್ತಕುಟುಂಬಿ ರುಕ್ಮಿಣಿಯು ಹಲವು ಬಾರಿ ಕೇಳಿ ಕೊಂಡ ಮೇಲೆ ತಾನು ಎರಡನೆಯ ಬಾರಿ ಮೆಲ್ಲುತ್ತಿದ್ದ ಅವಲಕ್ಕಿಯನ್ನು ಬಿಟ್ಟು ಬಿಟ್ಟನು. ಆ ಮೇಲೆ ಕುಚೇಲನನ್ನು ಆ ದಿನವೆಲ್ಲಾ ಅರಮನೆಯಲ್ಲಿಯೇ ಇಟ್ಟು ಕೊಂಡಿದ್ದು ಬೇಕು ಬೇಕಾದ ಉಪಚಾರಗಳನ್ನೆಲ್ಲಾ ಮಾಡಿಸಿ ಮಾರನೆಯ ದಿನ ಅವನನ್ನು ಬೀಳ್ಕೊಟ್ಟನು. ಕುಚೇಲನು ಕೃಷ್ಣ ಸನ್ನಿಧಿಯನ್ನು ಬಿಟ್ಟು ಹೋಗಲಾರದೆ ಕಣ್ಣೀರಿಡುತ್ತಾ ಮೆಲ್ಲಗೆ ನಡೆದನು. ಕೃಷ್ಣನು ಅವನನ್ನು ಕೊಂಚ ದೂರ ಸಾಗ ಕಳುಹಿಸಿ ತನ್ನ ಮಂದಿರಕ್ಕೆ ಹಿಂತಿರುಗಿದನು.

ಆ ವಿಪ್ರವರೇಣ್ಯನು ಕೃಷ್ಣನ ಅಪ್ಪಣೆಯನ್ನು ಪಡೆದು ಹೊರಟು ದಾರಿಯಲ್ಲಿ ಒಬ್ಬನೇ ಬರುತ್ತ "ನನ್ನ ಹೆಂಡತಿ ಹೇಳಿದುದನ್ನು ಕೃಷ್ಣನಿಗೆ ಸೂಚಿಸದೇ ಹೊರಟು ಬಂದೆ. ಇನ್ನು ಅವಳೇನೆನ್ನುವಳೋ? ನನ್ನ ಬರವನ್ನೇ ನಿರೀಕ್ಷಿಸುತ್ತಿರುವ ಆ ಮಾನಿನಿ ಎಷ್ಟು ಪೇಚಾಡುವಳೊ? ಆ ಭಗವಂತನು ಅವಳ ಮನೋದಯುವನ್ನು ಕಾಣನೇ?" ಎಂದು ಯೋಚಿ ಸುತ್ತಾ ದಾರಿ ನಡೆದನು. ನಿತ್ಯ ತೃಪ್ತನಾದ ಶ್ರೀ ಕೃಷ್ಣನು ತನ್ನ ಕೈಯ ಅವಲಕ್ಕಿಯನ್ನು ತಿಂದದ್ದು ಕುಚೇಲನಿಗೆ ದೊಡ್ಡ ಸಂತೋಷದ ವಿಷಯ ವಾಗಿತ್ತು. ಕೃಷ್ಣನ ಹಿರಿಯತನವನ್ನೂ ಸಜ್ಜನಿಕೆಯನ್ನೂ ಕುಚೇಲನು

ಮನದಣಿಯೆ ಕೊಂಡಾಡಿದನು. “ಧನವನ್ನು ಕೊಟ್ಟರೆ ಮನುಷ್ಯರಿಗೆ ಭಗವಂತನ ಮರವು ಬರುವುದೆಂದು ಅವನು ತನಗೆ ಐಶ್ವರ್ಯವನ್ನು ಕೊಡಲಿಲ್ಲವಾದೀತು.” ಎಂದು ಕುಚೇಲನು ಯೋಚಿಸತೊಡಗಿದನು. ಹೀಗೆ ಕೃಷ್ಣನನ್ನು ಸ್ಮರಿಸುತ್ತಾ, ಕುಚೇಲನು ಮೆಲ್ಲಗೆ ದಾರಿ ನಡೆದು ತನ್ನ ಊರನ್ನು ಸೇರಿದನು. ಆದರೆ ತನ್ನ ವಾಸದ ಬೀದಿಯ ಬಳಿಗೆ ಬಂದಾಗ ಅವನಿಗೆ ಗುರುತೇ ಹತ್ತಲಿಲ್ಲ. ತನ್ನ ಬಡ ಗುಡಿಸಿಲಿದ್ದ ಕಡೆಯಲ್ಲಿ ವೈಭವದ ಮಂದಿರವು ಏರ್ಪಟ್ಟಿತ್ತು. ಆ ಹೇಮ ನಿಬದ್ಧ ರತ್ನದ್ವಾರಗಳನ್ನೂ ವೈಭವದ ಗುಡಿ ತೋರಣಗಳನ್ನೂ ನೋಡಿ ಅದು ತನ್ನ ಮನೆಯಲ್ಲವೆಂದು ಅವನು ಯೋಚಿಸಿದನು. “ಇದು ಯಾರ ಮನೆ? ನಾನೆಲ್ಲಿಗೆ ಬಂದೆ?” ಎಂದು ಯೋಚಿಸುತ್ತಾ ಬೆರಗಾಗಿ ತನ್ನ ಮನೆಯನ್ನು ಪ್ರವೇಶಿಸಲು ಧೈರ್ಯ ಸಾಲದೆ ನಿಂತಿದ್ದ ಅವನನ್ನು ಕಂಡು ಅವನ ಹೆಂಡತಿಯು ಹಲವು ಸ್ತ್ರೀಯರೊಡನೆ ಓಡಿ ಬಂದು ಕಾಲ್ಗೆರಗಿ ಕರೆದೊಯ್ದಳು. ಮನೆಯಲ್ಲಿ ಹೊನ್ನ ಕಳಶದ ನೀರಿನಿಂದ ಅವನ ಕಾಲು ತೊಳೆದು ಉತ್ತಮವಾದ ದುಕೂಲವನ್ನು ಹೊದಿಸಿ ಅವನನ್ನು ಉಪಚರಿಸಿದಳು. ಆ ಐಶ್ವರ್ಯಾಧಿಕ್ಯವನ್ನು ನೋಡಿ ಕುಚೇಲನು “ಇದೆಲ್ಲ ಕೃಷ್ಣನ ಕೃಪೆ”ಎಂದು ಮನಗಂಡು ಭಕ್ತಿಯಲ್ಲಿ ಮೈ ಮರೆತನು. “ಇದೆಲ್ಲ ಆ ವಿಶ್ವಂಭರನ ದಿವ್ಯ ಪಾದ ಸಂದರ್ಶನದ ಫಲ. ಅಹಾ, ಹೇಳದೆ ಕೊಟ್ಟ ಆತನ ಔದಾರ್ಯ ಅನುಪಮವಾದದ್ದು. ಆ ಕೃಪಾನಿಧಿಯ ಕರುಣೆಯನ್ನು ನಾನೆಂತು ಮರೆವೆನು?” ಎಂದು ಕೃಷ್ಣನನ್ನು ಸ್ಮರಿಸಿ ಕೊಳ್ಳುತ್ತಾ ಕುಚೇಲನು ಬಹಳ ಸುಖಿಯಾದನು.

## ಅಶ್ವಮೇಧ

ದ್ವಾರಕಿಯಲ್ಲಿ ಶ್ರೀಕೃಷ್ಣನು ಹೀಗೆ ಲೀಲಾಮೂರುತಿಯಾಗಿ ವೈಭವದಿಂದ ಹೊತ್ತುಗಳೆಯುತ್ತಿರಲು ಒಂದುದಿನ ಯಜ್ಞೇಶ್ವರನು ಅಶ್ವಮೇಧಕ್ಕೆ ಯೋಗ್ಯವಾದ ಮಂತ್ರಪೂರಿತವಾದ ಒಂದು ಕುದುರೆಯನ್ನು ತಂದು ಕೃಷ್ಣನಿಗೆ ಕಾಣಿಕೆಯಾಗಿ ಕೊಟ್ಟನು. ಸಾಂಬ ಸಾತ್ಯಕಿ ಮೊದಲಾದವರು ಆ ಕುದುರೆಯ ಬೆಂಗಾವಲಿಗೆ ಹೋಗಿ ಅದನ್ನು ಭೂಪ್ರದಕ್ಷಿಣೆ ಮಾಡಿಸಿ

ಕೊಂಡು ಬಂದು ದ್ವಾರಕಿಯಲ್ಲಿ ತಂದು ಕಟ್ಟಿಹಾಕಿದರು. ಯದುಪುಂಗವರು ಯಜ್ಞಕ್ಕೆ ಬೇಕಾದ ಸಮಸ್ತ ಸಂಭಾರಗಳನ್ನು ತಂದು ಸಿದ್ಧಪಡಿಸಿದರು. ಯಜ್ಞದ ಮುಹೂರ್ತಕ್ಕೆ ಅವನಿಯ ರಾಯರೆಲ್ಲ ಬಂದು ಸೇರಿದರು. ಕುಂತೀ ನಂದನರು ಎಲ್ಲ ಬಂಧು ಬಾಂಧವರೊಡನೆ ಬಂದು ಯಾಗ ಮಂಟಪದಲ್ಲಿ ಸೇರಿದರು. ನಾನಾ ಆಶ್ರಮಗಳ ಋಷಿಶ್ರೇಷ್ಠರೆಲ್ಲಾ ಬಂದರು. ಕೃಷ್ಣನು ಯಜ್ಞದೀಕ್ಷೆಯನ್ನು ವಹಿಸಿದನು. ಭಾಗವತರೊಡೆಯನ ಯಜ್ಞಕ್ಕಾಗಿ ಎಲ್ಲ ರಾಜರೂ ಯಜ್ಞಕ್ಕೆ ಬೇಕಾದ ಸಮಸ್ತ ದ್ರವ್ಯವನ್ನು ಹೊತ್ತು ತಂದರು. ಶ್ರೀರಮಣನ ಯಾಗ ವೈಭವವನ್ನು ಯಾರು ಬಣ್ಣಿಸಬಹುದು? ಆತನ ಹದಿನಾರು ಸಾವಿರ ಪತ್ನಿಯರೂ, ಅವರ ಪುತ್ರರೂ, ಭೃತ್ಯರೂ, ಪರಿಜನರೂ ಎಲ್ಲರೂ ವಿವಿಧ ವಸ್ತ್ರಾಭರಣಾಲಂಕೃತರಾಗಿ ಸಡಗರದಿಂದ ಓಡಾಡುತ್ತಿದ್ದರು. ಯಜ್ಞ ಕ್ರಮವಾಗಿ ನಡೆಯತೊಡಗಿತು. ಸಮಸ್ತ ಜನಕ್ಕು ನಿರಂತರವಾದ ಭೋಜನಾದಿಗಳ ವ್ಯವಸ್ಥೆಯಾಗಿತ್ತು. ಹೀಗೆ ಪರಮೋತ್ಸವದಿಂದ ಎಲ್ಲರು ಸುಖಸಾಗರದಲ್ಲಿ ಓಲಾಡುತ್ತಾ ಸಂತೋಷದಿಂದಿರಲು ಒಬ್ಬ ಬ್ರಾಹ್ಮಣನು ಕೈಲಿ ಹುಲ್ಲು ಹಿಡಿದು ಗೋಳಾಡುತ್ತಾ ಯಾಗ ಮಂದಿರದ ಬಾಗಿಲಿಗೆ ಬಂದನು. ''ಕಪಟಿಗಳೂ, ದುರ್ವೃತ್ತರೂ, ಅತಿಲಂಪಟರೂ, ಧರ್ಮವಿಹಿಂಸಕರೂ, ಕಡುಕೃಪಣರೂ, ಅರ್ಥಾಸಕ್ತಮಾನಸರೂ ಆದ ಈ ರಾಜರ ರಾಜ್ಯದಲ್ಲಿ ಜನ ಬದುಕುವುದು ಹೇಗೆ? ಅಯ್ಯೋ ಕೆಟ್ಟೆನು ಕೆಟ್ಟೆನು. ನೃಪಕುಲದ ದೋಷದಿಂದ ನನ್ನ ಪುತ್ರರು ಸತ್ತರು'' ಎಂದು ಹೇಳುತ್ತಾ ಶೋಕಾಕ್ರಾಂತಮತಿಯಾದ ಬ್ರಾಹ್ಮಣನು ಬಾಗಿಲಲ್ಲಿ ಗೋಳಾಡುತ್ತಿರಲು, ಕೃಷ್ಣನು ಅದನ್ನು ಅರಿತು ಅವನನ್ನು ಕರೆಯಕಳುಹಿಸಿ ಅವನ ದುಃಖವನ್ನು ವಿಚಾರಿಸಿದನು. ಅರ್ಜುನನು, ''ಎಲೆ ವಿಪ್ರಾ, ಯಾರ ದೆಸೆಯಿಂದ ನಿನಗೆ ಈ ದುಃಖವಾಯಿತು? ಹೇಳು, ನಿನ್ನ ದುಃಖನಿವಾರಣೆಗೆ ಪ್ರಯತ್ನ ಮಾಡುವೆನು'' ಎಂದನು. ಆದರೆ ಆ ಬ್ರಾಹ್ಮಣನು ''ಅಯ್ಯಾ ನನ್ನ ದೌರ್ಭಾಗ್ಯವನ್ನು ಏನೆಂದು ಹೇಳಲಿ? ನನ್ನ ಮಕ್ಕಳು ಹುಟ್ಟಿದ ಒಡನೆಯೇ ಸೂತಿಕಾ ಗೃಹದಲ್ಲಿಯೇ ಮಾಯವಾಗುವುವು. ಅದೇನಾಗುವುದೋ ನಾನರಿಯೆ." ಎನ್ನಲು, ಅರ್ಜುನನು "ಇನ್ನು ನೀನು ಶೋಕಿಸಬೇಡ ನಿನ್ನ ಮನೋರಥವನ್ನು

ನಾನು ಈಡೇರಿಸುತ್ತೇನೆ, ಏಳು.'' ಎನಲು ಆ ವಿಪ್ರನು ಅರ್ಜುನನ ಮಾತನ್ನು ನಂಬದೆ, "ಎಲೈ ಸಾಹಸಿಗನೇ ನೀನಾರು? ಬಲದೇವ, ಕೃಷ್ಣ ಮತ್ತು ಅವನ ಮಕ್ಕಳಿಗೇ ಅಸಾಧ್ಯವಾದ ಈ ಕೆಲಸವನ್ನು ನೀನು ಹೇಗೆ ಮಾಡುವೆ? ಸೂರ್ಯನಿಂದ ಹರಿಯದ ಕತ್ತಲೆಯ ರಾಶಿಯನ್ನು ಮಿಕ್ಕ ಗ್ರಹಗಳು ಕೆಡಿಸುವ ನಂಬುಗೆ ನನಗಿಲ್ಲ'' ಎಂದು ಹೇಳಿದನು. ವಿಪ್ರನ ಈ ಮಾತುಗಳನ್ನು ಕೇಳಿ ಅರ್ಜುನನು ಬಹಳ ಸಿಟ್ಟಾದನು. "ಮರುಳು ಹಾರುವ, ನನ್ನ ಸಾಮರ್ಥ್ಯವನ್ನರಿಯದೆ ಹೀಗೆ ತುಚ್ಛೀಕರಿಸಿ ಮಾತಾಡುವೆ. ನನಗೆ ಧರೆಯಲ್ಲಿ ಸರಿಯಾದವರಾರು? ಹರಿಬಲರಿಗೇ ಸಾಧ್ಯವಾದರೆ ನನಗೆ ಹಾನಿಯೇ? ನನ್ನ ಪ್ರತಿಜ್ಞೆಗೆ ಭಂಗವಾದರೆ ದೇಹ ತ್ಯಾಗ ಮಾಡುತ್ತೇನೆ. ಹೋಗು; ನಿನ್ನ ಅಂಗನೆಗೆ ಈ ವಾರ್ತೆಯನ್ನು ಹೇಳಿ ಅವಳನ್ನು ಸಂತೈಸು'' ಎಂದು ನುಡಿದು, ಆತನನ್ನು ಬೀಳ್ಕೊಟ್ಟು ಕೃಷ್ಣನ ಬಳಿಗೆ ಬಂದು ವಿಪ್ರಸುತನ ಅಂಗರಕ್ಷೆಗೆ ತನಗೆ ಅಪ್ಪಣೆ ಕೊಡ ಬೇಕೆಂದು ಬೇಡಿದನು. ಕೃಷ್ಣನು ಅರ್ಜುನನ ಮಾತುಗಳನ್ನು ಕೇಳಿ ನಸುನಗುತ್ತ "ಪಾರ್ಥ ಇದು ನಿನಗೆ ದುಷ್ಕರವು; ನೀನು ಇದರ ಸ್ವರೂಪ ವನ್ನರಿಯೆ" ಎನ್ನಲು, ಪಾರ್ಥನು ಗರ್ವದಿಂದ "ಕೃಷ್ಣ, ನನ್ನನ್ನೇಕೆ ಬೆದರಿಸುವೆ? ಸುರಲೋಕಪಾಲರನ್ನು ಸಹ ಗೆದ್ದೆನು. ಖಾಂಡವ ದಹನದ ಸಮಯದಲ್ಲಿ ಇಂದ್ರನನ್ನೂ ಗೆದ್ದೆನು. ಸಾಕ್ಷಾತ್ ಪರಶಿವನೇ ನನ್ನ ಭುಜ ಬಲಕ್ಕೆ ಮೆಚ್ಚಿ ಪಾಶುಪತಾಸ್ತ್ರವನ್ನು ಕೊಟ್ಟನು. ನನಗೆ ಸಾಧ್ಯವಾಗದೇ ಇರುವ ಕೆಲಸವೆಂಥಾದ್ದು?'' ಎಂದು ಅಬ್ಬರಿಸಿದನು. ಆಗ ಕೃಷ್ಣನು ಮಂದಹಾಸದಿಂದ ನೋಡುತ್ತ "ಆಗಲಿ'' ಎನ್ನಲು, ಅರ್ಜುನನು ರಥ ವನ್ನೇರಿ, ಆ ಬ್ರಾಹ್ಮಣನನ್ನು ಕೂಡಿಸಿಕೊಂಡು ಉತ್ಸಾಹದಿಂದ ಹೊರಟನು. ಆ ದ್ವಿಜಮಂದಿರವನ್ನು ಸೇರಿ, ರಥವನ್ನು ನಿಲ್ಲಿಸಿ, "ಎಲೆ ವಿಪ್ರ, ನಿನ್ನ ಮನೆಗೆ ಹೋಗಿ ನಿನ್ನ ಅಂಗನೆಗೆ ಹೇಳು'' ಎನ್ನಲು, ಅದರಂತೆ ವಿಪ್ರನು ಮನೆ ಹೊಕ್ಕು ಹೆಂಡತಿಗೆ ಧೈರ್ಯ ಹೇಳಲು, ಗರ್ಭವತಿಯಾಗಿದ್ದ ಆಕೆಯು ಸೂತಿಕಾಗೃಹವನ್ನು ಸೇರಿದಳು. "ಇದು ಜನನಸಮಯ'' ಎಂದು ವಿಪ್ರನು ಹೇಳಲು; ಅರ್ಜುನನು ಗಾಂಡೀವವನ್ನು ಹಿಡಿದು ಮಹಾಸ್ತ್ರ ಗಳನ್ನು ಹೂಡಿ ದಶದಿಕ್ಕುಗಳನ್ನು ಬಂಧಿಸಿದನು. ಆ ವಿಪ್ರನ ಹೆಂಡತಿ

ಗಂಡು ಮಗುವನ್ನು ಹೆತ್ತಳು. ಆಗ ವಿಪ್ರನು "ಮಗುವನ್ನು ಕಾಯ್ದುಕೋ, ಕಾಯ್ದುಕೋ" ಎಂದು ಕಲಿ ಪಾರ್ಥನನ್ನು ಕರೆದನು. ಆದರೇನು? ಆ ಹಸುಳೆಯು ಹಾರಿಹೋಯಿತು ಪಾರ್ಥನು ಕಟ್ಟಿದ ಶರಪಂಜರವು ಇದ್ದಹಾಗೆಯೇ ಇದ್ದಿತು. ಆಗ ವಿಪ್ರನು ಮಹಾ ದುಃಖದಲ್ಲಿ ಮುಳುಗಿ ಅರ್ಜುನನನ್ನು ಕುರಿತು "ಅಯ್ಯಾ, ನೀನು ಸೊರಹರಿಗೆ ಅರಸ, ನಿನ್ನದೆಲ್ಲ ಮಾತಿನ ಪರಾಕ್ರಮ. ನೀನು ಕಾಪಾಡಿದ್ದು ಆಯಿತಲ್ಲಾ? ಸಂಕರ್ಷಣಾಚ್ಯುತರಿಗೆ ಸಾಧ್ಯವಲ್ಲದ್ದು ನಿನಗೆ ಸಾಧ್ಯವೇ ?" ಎಂದು ಜರೆದು ಮಾತನಾಡಿದನು. ಆಗ ಅರ್ಜುನನು ಬಹಳ ನೊಂದು ಅಯ್ಯಾ ಇದಿಷ್ಟಕ್ಕೋಸ್ಕರ ನನ್ನನ್ನು ಅಲಕ್ಷ್ಯಮಾಡಿ ಅಲ್ಲಗಳೆಯಬೇಡ. ನಾನು ಈಗಲೇ ಯಮನ ಪಟ್ಟಣವನ್ನು ಧ್ವಂಸಮಾಡಿ ನಿನ್ನ ಮಗನನ್ನು ತರುತ್ತೇನೆ." ಎಂದು ಹೇಳಿ ಅರ್ಜುನನು ಹೊರಟನು. ಯಮನ ಊರಿನಲ್ಲಿ, ಇಂದ್ರನ ರಾಜಧಾನಿಯಲ್ಲಿ, ಲೋಕಪಾಲಕರ ಸ್ಥಳಗಳಲ್ಲೆಲ್ಲಾ ಹುಡುಕಿ, ಕೈಲಾಸ ವೈಕುಂಠಗಳನ್ನೆಲ್ಲಾ ನೋಡಿ ಎಲ್ಲಿಯೂ ಆ ವಿಪ್ರನ ಶಿಶುವನ್ನು ಕಾಣದೆ ಹತಾಶನಾಗಿ ಹಿಂತಿರುಗಿದನು. ಮೇಲು ಜಗಗಳನ್ನೆಲ್ಲಾ ಹೀಗೆ ಹುಡುಕಿ ಆದಮೇಲೆ ಪಾರ್ಥನು ಪಾತಾಳ ಲೋಕಗಳನ್ನು ಹೊಕ್ಕು ನೋಡಿದನು. ಎಲ್ಲಿಯೂ ವಿಪ್ರನ ಬಾಲಕನನ್ನು ಕಾಣದೆ ಯಾಗಮಂಟಪದಲ್ಲಿದ್ದ ಗೋವಿಂದನನ್ನು ಕಂಡು "ನನ್ನ ಪ್ರತಿಜ್ಞೆ ಭಂಗವಾಯಿತು. ಇನ್ನು ನಾನು ಅಗ್ನಿಪ್ರವೇಶ ಮಾಡುತ್ತೇನೆ" ಎಂದು ನುಡಿಯಲು, ಕೃಷ್ಣನು ಅವನನ್ನು ಸಂತೈಸಿ, "ಅಯ್ಯಾ, ನಾನಿದ್ದು ನೀನು ಅಗ್ನಿಪ್ರವೇಶ ಮಾಡಬೇಕೆ? ನನ್ನ ಮಾತನ್ನು ಕೇಳದೆ ನೀನು ವೃಥಾ ನೊಂದೆ. ಈಗ ನಾನು ನಿನ್ನ ಆ ಬಾಲಕನನ್ನು ತೋರುತ್ತೇನೆ ನಡೆ" ಎಂದು ಹೇಳಿ ಅರ್ಜುನನನ್ನು ಕರೆದುಕೊಂಡು ಕೃಷ್ಣನು ಹೊರಟನು.

ಕೃಷ್ಣಾರ್ಜುನರಿಬ್ಬರೂ ಸಮುದ್ರ ಪರ್ಯಂತ ನಡೆದು ಸಾಗರಗಳನ್ನು ದಾಟಿ ಇನ್ನೂ ಪಶ್ಚಿಮಕ್ಕೆ ಹೊರಟು, ಮುಂದೆ ತೇಜೋರಾಶಿಯಾಗಿದ್ದ ಪಟ್ಟಣವನ್ನು ಕಂಡರು. ಅರ್ಜುನನು ಅದನ್ನು ನೋಡಲಾರದೆ ಕಣ್ಣು ಮುಚ್ಚಿಕೊಂಡನು. ಆಗ ಕೃಷ್ಣನು ಅವನಿಗೆ ಧೈರ್ಯ ಹೇಳಿ ದಿವ್ಯದೃಷ್ಟಿಯನ್ನು ಕೊಟ್ಟು ಮುಂದೆ ಹೊಕ್ಕನು. ಅವರು ಒಂದು ಮಾಣಿಕ್ಯಮಣಿ ಭವನ

ವನ್ನು ಹೊಕ್ಕು ಅಲ್ಲಿ ಲೆಕ್ಕವಿಲ್ಲದಷ್ಟು ಜೀವರಾಶಿಗಳನ್ನು, ಸಾಕ್ಷಾತ್ ವಿಷ್ಣು ಮೂರ್ತಿಯನ್ನು ಕಂಡರು. ಸನಕಾದಿ ಮುನಿವರರೂ, ದಿಕ್ಪಾಲಕರೂ, ಪರಮೇಷ್ಠಿ ರುದ್ರ ಆದಿತ್ಯರೂ ಓಲಗಿಸುತ್ತಾ ಕುಳಿತಿದ್ದರು. ಅಲ್ಲಿ ಅಹಿ ಪತಿಯ ಹಾಸಿಗೆಯಮೇಲೆ ಮಲಗಿದ್ದ ಮಹಾ ವಿಷ್ಣುವನ್ನು ಕೃಷ್ಣಾರ್ಜುನರು ಕಂಡರು. ಅಣಿಮಾದಿ ಸಿದ್ಧಿಗಳಿಗೆ ಒಡೆಯನಾದ ವಿಷ್ಣುವಿಗೆ ಕೃಷ್ಣಾರ್ಜುನರು ನಮಸ್ಕಾರ ಮಾಡಿದರು. ಆಗ ಆದಿಪರಮಾತ್ಮನು ಇವರನ್ನು ಕೈಹಿಡಿದೆತ್ತಿ, ತಕ್ಕೈಸುತ್ತಾ ಬಂದ ಬರವೇನೆಂದು ಕೇಳಲು, ದ್ವಿಜಪುತ್ರನಿಗಾಗಿ ತಾವು ಬಂದ ಸುದ್ದಿಯನ್ನು ಅವರು ಹೇಳಿದರು. ಆಗ ಆ ಮಹಾ ವಿಷ್ಣುವು ಇವರನ್ನು ಕುರಿತು "ಭೂಮಿಯ ಭಾರ ಇಳಿಯಿತು. ಧರ್ಮ ಸಂರಕ್ಷಣೆಯಾಯಿತು. ಗೋವುಗಳಿಗೆ, ಬ್ರಾಹ್ಮಣರಿಗೆ, ದೇವತಾದಿಗಳಿಗೆ ನಿಮ್ಮಿಂದ ನಿರ್ಭಯವಾಯಿತು. ನಿಮ್ಮ ಸತ್ಕೀರ್ತಿಯು ಕೇಳುವವರ ಸಂಸಾರ ತಾರಕವಾಯಿತು. ನನ್ನ ಅವತಾರ ಮೂರ್ತಿಗಳಾದ ನೀವು, ಈ ಲೋಕಕ್ಕೆ ಬರದೆ ಇನ್ನೂ ತಡಮಾಡುವುದೇಕೆ?" ಎಂದು ನುಡಿದು ಆ ದ್ವಿಜಪುತ್ರರನ್ನು ಅವರಿಗೆ ಕೊಟ್ಟನು. ಗೋವಿಂದ ಪಾರ್ಥರು ವಿನಯದಿಂದ ನಮಸ್ಕರಿಸಿ ಅಲ್ಲಿಂದ ಬೀಳ್ಕೊಂಡು ಬಂದು ಆ ಬ್ರಾಹ್ಮಣನಿಗೆ ಆ ಮಕ್ಕಳನ್ನು ಕೊಟ್ಟು ಅಧ್ವರಶಾಲೆಗೆ ಬಂದರು. ಸಮಸ್ತ ಪರಿಜನರೂ, ಪುರಜನರೂ ಕೃಷ್ಣಾಗಮನದಿಂದ ಬಹಳ ಸಂತುಷ್ಟರಾದರು. ವಿಷ್ಣು ಲೋಕವನ್ನು ನೋಡಿಬಂದ ಅರ್ಜನನು ಆ ವೈಭವವನ್ನು ಮತ್ತೆ ಮತ್ತೆ ಸ್ಮರಿಸಿಕೊಂಡು "ಗಂಡುಗಳೆಂದು ಹೇಳಿಕೊಳ್ಳುವವರು ನಿಜವಾಗಿಯೂ ಭಂಡರು. ಪುಂಡರೀಕಾಕ್ಷನ ಕೃಪಾದೃಷ್ಟಿಯಿಲ್ಲದಮೇಲೆ ಯಾರ ಪರಾಕ್ರಮವೂ ಏನೂ ನಡೆಯದು" ಎಂದು ಪದೇ ಪದೇ ಭಾವಿಸಿಕೊಳ್ಳುತ್ತಿದ್ದನು. ಬಳಿಕ ಶ್ರೀಕೃಷ್ಣ ಪರಮಾತ್ಮನು ಯಜ್ಞವನ್ನು ವೈಭವದಿಂದ ಮುಗಿಸಿದನು. ಋತ್ವಿಜಾದಿಗಳಿಗೆ ಅಪಾರವಾದ ಧನವನ್ನು ಕೊಟ್ಟು ಅವಭೃತ ಸ್ನಾನಮಾಡಿದನು. ಹೀಗೆ ಲಕ್ಷ್ಮೀಕಾಂತನಾದ ಶ್ರೀಕೃಷ್ಣನು ನರಲೀಲೆಯನ್ನು ಮೆರೆಯುತ್ತಾ ಸಕಲ ಸಜ್ಜನಸಂತತಿಗೆ ಸುಖವನ್ನುಂಟುಮಾಡುತ್ತಾ ಕಾಂತೆಯರೊಡನೆ, ನೋಡುವ ಮಾಯಾ ಭ್ರಾಂತರಿಗೆ ವಿಷಯ ಸುಖಿಯ ಹಾಗೆ ಕಾಣುತ್ತ ಭಕ್ತರಿಗೆ ಜ್ಞಾನೋಪದೇಶಮಾಡುತ್ತಿದ್ದನು.

# ದಂತವಕ್ತ್ರ

ಕೃಷ್ಣನು ಅನೇಕ ರಾಕ್ಷಸರನ್ನು ಕೊಂದು ಮಹಾಭಾರತ ಯುದ್ಧದಲ್ಲಿ ಪಾರ್ಥನ ಸಾರಥಿಯಾಗಿ ಅನೇಕ ದುಷ್ಟಕ್ಷತ್ರಿಯರ ವಿನಾಶವನ್ನು ಸಾಧಿಸಿ ಭೂಭಾರವನ್ನಿಳಿಸುವುದರಲ್ಲಿ ಕೃತಕೃತ್ಯನಾಗಿ ದ್ವಾರಕಿಯಲ್ಲಿ ಸುಖದಿಂದಿರುತ್ತಿರಲು ಒಂದುದಿನ ಇದ್ದಕ್ಕಿದ್ದಂತೆ ಶಿಶುಪಾಲನ ತಮ್ಮನಾದ ದಂತವಕ್ತ್ರನೆಂಬ ರಾಕ್ಷಸನು ಸೈನ್ಯ ಸಮೇತನಾಗಿ ದ್ವಾರಕಿಯಮೇಲೆ ದಾಳಿಯಿಟ್ಟನು. ಬಹಳ ಶೂರರಾದ ದೈತ್ಯರನೇಕರು ಅವನೊಡನೆ ಯುದ್ಧಾಪೇಕ್ಷೆಯಿಂದ ಆಯುಧಪಾಣಿಗಳಾಗಿ ಬಂದರು. ಓಡಿ ಬರುವ ಕುಲಪರ್ವತದಹಾಗೆ ದಂತವಕ್ತ್ರನು ಗದೆಯನ್ನು ಬೀಸುತ್ತಾ ಅಸುರಾಂತಕನ ಸಮ್ಮುಖಕ್ಕೆ ಬಂದನು. ಅವನ ಬರವನ್ನು ಕಂಡು ಕೃಷ್ಣನು ರಥದಿಂದ ಇಳಿದು ತನ್ನ ಪರಿಜನಕ್ಕೆ ಧೈರ್ಯಹೇಳಿ ಮೇರೆಮೀರಿ ನಿಂತ ಸಮುದ್ರಕ್ಕೆ ಸೇತುವೆ ಕಟ್ಟಿದ ಹಾಗೆ ಶ್ರೀಕೃಷ್ಣನು ಆ ದೈತ್ಯ ಸೈನ್ಯವನ್ನು ಅಡ್ಡಗಟ್ಟಿ ನಿಲ್ಲಿಸಿದನು. ದಂತವಕ್ತ್ರನು ತನ್ನ ಅಣ್ಣನ ಕೊಲೆಮಾಡಿದ ಕೃಷ್ಣನ ಮೇಲೆ ಸೇಡುತೀರಿಸಿಕೊಳ್ಳುವ ಬಯಕೆಯಿಂದ ಬಂದಿದ್ದನಾದಕಾರಣ '' ನನ್ನ ಸುಕೃತದಿಂದ ಇಂದು ನಿನ್ನನ್ನು ಕಂಡೆ. ಗೋಪಾಲಕನೇ, ನೀನು ಗಂಡುಗಲಿಯಾದರೆ ಕತ್ತಿಯನ್ನು ಹಿಡಿ. ದೇವಸಿಕರದಲ್ಲಿ ನಿನ್ನನ್ನು ಕಾಪಾಡುವವರು ಯಾರಿದ್ದಾರೆಯೋ ಕರೆ. ನನ್ನ ಒಡಹುಟ್ಟಿದವನನ್ನು ಕೊಂದೆ. ಭೀಷ್ಮಕರಾಜನ ಮಗನಾದ ರುಕ್ಮಿಯನ್ನು ಕರುಣೆಯಿಲ್ಲದೆ ಕೊಂದ ಬಂಧುದ್ರೋಹಿ ನೀನು. ನನ್ನ ಸಮ್ಮುಖದಲ್ಲಿ ನೀನು ನಿಂತರೆ ಅವರೆಲ್ಲರ ಕೊಲೆಯ ಸೇಡನ್ನು ತೀರಿಸಿಕೊಳ್ಳುತ್ತೇನೆ." ಎಂದು ಕೃಷ್ಣನನ್ನು ಮೂದಲಿಸಿ ಯುದ್ಧಕ್ಕೆ ಕರೆದನು.

ರಾಕ್ಷಸನ ಈ ಜಂಬದ ಮಾತುಗಳನ್ನು ಕೇಳಿ ಕೃಷ್ಣನು ಒಳಗೊಳಗೆ ನಕ್ಕು "ನಾನು ಯುದ್ಧಕ್ಕೆ ನಿಲ್ಲದಿದ್ದರೆ ನೀನು ಬಿಡುವೆಯಾ? ಅಯ್ಯಾ, ನನಗೆ ರಕ್ಷಕರಿಲ್ಲ. ನಾನು ಅನಾಥ. ನಿನ್ನಂಥ ಬಲಿಷ್ಠನೊಡನೆ ನನಗೆ ವೈರ ತರವಲ್ಲ. ಆದರೆ ನೀನು ಯುದ್ಧಕ್ಕೆ ಕರೆಯುತ್ತಿರುವಾಗ ಇನ್ನು ಯತ್ನವೇನಿದೆ ?'' ಎಂದು ಹೇಳುತ್ತಾ ತನ್ನ ಗದೆಯನ್ನು ತೂಗಿದನು. ಕೃಷ್ಣನ ಮಾತಿನ ಅಣಕವನ್ನು ಕೋಪಮದಮತ್ತನಾದ ಆ ರಕ್ಕಸನು ಅರಿತುಕೊಳ್ಳಲಿಲ್ಲ.

ಅವನು "ಎಲವೋ! ಬಂಧುದ್ರೋಹಿ, ವಿಶ್ವಾಸಘಾತಕ ಹರಟೆಯುಮಲ್ಲ ಈಗಲೇ ನಿನ್ನನ್ನು ಕೊಲ್ಲುವೆನು ನೋಡು'' ಎಂದು ಕೂಗುತ್ತ ತನ್ನ ಗ ಯನ್ನು ಕೃಷ್ಣನ ತಲೆಯಮೇಲೆ ಅಪ್ಪಳಿಸಿದನು. ಆದರೆ ಕೃಷ್ಣನು ಆ ಗದೆಯ ಪೆಟ್ಟಿಗೆ ಸಹಿಸಿಕೊಂಡು "ಆಯಿತೇ, ನಿನ್ನ ಪರಾಕ್ರಮ? ಇದರಿಂದ ನಿನ ಮನೋರಥ ಸಿದ್ಧಿಯಾಗದು. ಈಗ ನನ್ನ ಗದೆಯಿಂದ ಹೊಡೆಯುತ್ತೇ ನೋಡು'' ಎಂದು ಹೇಳಿ ಕೌಮೋದಕಿಯಿಂದ ಹೊಡೆಯಲು ಅದರ ಪೆ ನಿಂದ ಆ ರಕ್ಕಸನ ಎದೆಬಿರಿದು ಬಾಯಿ ಮೂಗುಗಳಲ್ಲಿ ನೆತ್ತರು ಹರಿಯಿತು ದಂತವಕ್ತ್ರ ಮಹಾರಾಜನು ತನ್ನ ದೇಹವನ್ನು ಭೂಮಿಗೆ ಕಾಣಿಕೆಯಾ ಕೊಟ್ಟುಬಿಟ್ಟನು. ಕೃಷ್ಣನಿಗೆ ಅಸುರಾಂತಕನೆಂಬ ಹೆಸರು ಸಾರ್ಥಕವ ಯಿತು. ದಂತವಕ್ತ್ರನ ಆತ್ಮಜ್ಯೋತಿಯು ಮಿಂಚಿನಂತೆ ಹೊರ ಹೊರಟ ಮುರಹರನ ಆತ್ಮಜ್ಯೋತಿಯನ್ನು ನೇರಿತು. ದಂತವಕ್ತ್ರನ ಮರಣವನ ನೋಡಿ ಅವನ ತಮ್ಮ ವಿಡೂರಥನು ಖಡ್ಗಪಾಣಿಯಾಗಿ ಕೃಷ್ಣನಮೇ ನುಗ್ಗಿದನು. ಆದರೆ ಪತಂಗವು ದೀಪಕ್ಕೆ ಬಿದ್ದಹಾಗೆ ಆ ರಕ್ಕಸನು ಕೃಷ್ಣ ಚಕ್ರಾಯುಧಕ್ಕೆ ಸಿಕ್ಕಿ ಸತ್ತನು. ರಕ್ಕಸರ ಅಪಾರವಾದ ಸೈನ್ಯವು ಕೃಷ್ಣ ವಶವಾಯಿತು. ಪುರುಷೋತ್ತಮನು ಗಜ ರಥ ತುರಗಗಳನ್ನು ತೆಗೆದುಕೊಂಡ ದ್ವಾರಕಿಗೆ ಹಿಂತಿರುಗಿದನು.

## ದೇವಕಿಯ ಕೋರಿಕೆ

ಒಂದು ದಿನ ಕೃಷ್ಣನು ಬಲಭದ್ರ ಸಹಿತನಾಗಿ ತನ್ನ ತಂದೆ ಮಂದಿರಕ್ಕೆ ಬಂದು ಪಾದಾಭಿವಂದನಮಾಡಿ ನಿಲ್ಲಲು ದೇವಕಿದೇವಿಯ ಕೃಷ್ಣನನ್ನಾದರಿಸಿ ಹೀಗೆ ನುಡಿದಳು. "ಕೃಷ್ಣಾ, ನೀನು ಸಾಂದೀಪಿನಿಯ ಮಗನನ್ನು ಬದುಕಿಸಿ ತಂದು ಕೊಟ್ಟೆಯಲ್ಲವೇ? ನೀನು ಅಶ್ವಮೇಧವನ ನಡೆಸುತ್ತಿದ್ದಾಗ ಬಂದು ಮೊರೆಯಿಟ್ಟ ಆ ಬ್ರಾಹ್ಮಣನ ಅಪಹೃತ ಪುತ್ರರನ ನೀನು ತಂದು ಕೊಟ್ಟೆ. ನಿನ್ನ ಒಡಹುಟ್ಟಿದವರಾದ ನನ್ನ ಆರು ಜ ನಂದನರು ಕಂಸನ ಕ್ರೌರ್ಯದಿಂದ ಸತ್ತು ಹೋದರು. ಅವರನ್ನು ನನ ತಂದುಕೊಡು.'' ದೇವಕಿಯ ಈ ಪ್ರಾರ್ಥನೆಯನ್ನು ಕೇಳಿ, ಕೂಡಲೇ ಗೋವಿ

ದ ರಾಮರು ಆ ಮೃತ ಕುಮಾರರಿದ್ದ ಸ್ಥಳವನ್ನು ತಿಳಿದು ಸುತಲ ಲೋಕಕ್ಕೆ ಹೋದರು. ಈ ದೇವ ಪುರುಷರು ಬಂದದ್ದನ್ನು ಕಂಡು ಸುತಲ ಲೋಕಾಧಿಪತಿಯು ಇವರನ್ನು ರಾಜಮರ್ಯಾದೆಯಿಂದ ಎದುರುಗೊಂಡು ತನ್ನ ಅರಮನೆಗೆ ಬಿಜಯಮಾಡಿಸಿ ದಿವ್ಯಾಸನಗಳಲ್ಲಿ ಕುಳ್ಳಿರಿಸಿ ಉಪಚರಿಸಿದನು. ಕುಶಲಪ್ರಶ್ನೆಗಳಾದಮೇಲೆ "ದೇವರವರು ಏನು ನಿಮಿತ್ತವಾಗಿ ಇತ್ತ ದಯಮಾಡಿಸಿದಿರಿ? ತಮ್ಮ ಭೃತ್ಯನಾದ ನನ್ನ ಮನೆಗೆ ಬಂದದ್ದು ಬಹಳ ಸಂತೋಷ. ನನ್ನಿಂದಾಗಬೇಕಾದ ಸೇವೆ ಏನೋ ತಿಳಿಸಬೇಕು." ಎಂದು ಬಿನ್ನೈಸಿದನು ಆಗ ಕೃಷ್ಣನು ಆ ದೈತ್ಯಪತಿಯನ್ನು ಕುರಿತು "ದೇವಕೀದೇವಿಯ ಆರು ಮಕ್ಕಳನ್ನು ಕಂಸನು ಕೊಂದನಷ್ಟೆ? ಈಗ ನಮ್ಮ ತಾಯಿಯು ಆ ಮಕ್ಕಳನ್ನು ನೋಡ ಬಯಸುತ್ತಾಳೆ. ಅವರನ್ನು ನನಗೆ ಕೊಡು." ಆ ಆರು ಜನ ಹುಡುಗರನ್ನು ಬಲಿ ಚಕ್ರವರ್ತಿಯು ತಂದು ಕೃಷ್ಣನಿಗೆ ಸಮರ್ಪಿಸಲು ಅವರನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ಬಲಿಚಕ್ರವರ್ತಿಯ ಸತ್ಕಾರವನ್ನು ಕೈಕೊಂಡು ದ್ವಾರವತಿಗೆ ಬಂದು ಆ ಮಕ್ಕಳನ್ನು ತಮ್ಮ ತಾಯಿಯ ಸನ್ನಿಧಿಗೆ ಒಪ್ಪಿಸಿದನು. ದೇವಕಿಯು ಮನ್ಮಥೋಪಮಮೂರ್ತಿಗಳಾದ ಆ ಆರು ಜನ ಮಕ್ಕಳನ್ನು ಕಂಡು ಹರುಷ ವಿಭ್ರಮಗಳಿಂದ ಅವರನ್ನು ಅಪ್ಪಿಕೊಂಡಳು. ಆ ಕುಮಾರರು ಹರಿ ಬಲರಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಅವರ ಪಾದಧೂಳಿಯನ್ನು ತಲೆಯಲ್ಲಿ ಧರಿಸಿ ವಿಮಾನವನ್ನು ಹತ್ತಿ ದೇವಲೋಕಕ್ಕೆ ಹೊರಟುಹೋದರು. ದೇವಕಿದೇವಿಯು ಎಲ್ಲವನ್ನೂ ಬೆರಗಿನಿಂದ ನೋಡುತ್ತಿದ್ದಳು. ಕೊನೆಗೆ ದೇವಕಿಯು ಶ್ರೀ ಕೃಷ್ಣನ ಮಹಾಮಹಿಮೆಯನ್ನು ಅರಿತು ಕೊಂಡು "ಕೃಷ್ಣಾ, ನೀನು ಈ ಜಗಕ್ಕೆ ದೈವವೆಂಬುದನ್ನು ಈಗ ಅರಿತುಕೊಂಡೆ. ಇಂಥ ಪರಮಾತ್ಮನು ಮಾಯಾಧೀನರಾದ ನಮಗೆ ಗೋಚರವಾದದ್ದು ನಮ್ಮ ಪುಣ್ಯ. ಕರುಣಾಕರನೆ, ಭಕ್ತದೇಹಿಕನೆ, ನನಗೆ ನಿನ್ನ ಪಾದಸ್ಮರಣೆಯನ್ನು ಅನುಗ್ರಹಿಸು." ಎಂದು ನುಡಿದಳು. ವಸುದೇವನು ತನ್ನ ಮೊದಲ ಆರು ಮಕ್ಕಳ ಆಗಮನ ನಿರ್ಗಮಗಳನ್ನೂ ತನ್ನ ಹೆಂಡತಿಯ ಅನುತಾಪ, ಆ ಮೇಲೆ ಬಂದ ಭಕ್ತಿಭಾವ ಇದನ್ನೆಲ್ಲ ಗಮನಿಸುತ್ತಿದ್ದು, ಕೃಷ್ಣ ಬಲರಾಮರನ್ನು ಕುರಿತು ಹೀಗೆ ನುಡಿದನು. "ನೀವು ನನ್ನ ಆತ್ಮಜರಲ್ಲ. ದಿಟ

ವಾಗಿಯೂ ನೀವು ಮರ್ತ್ಯರೇ ಅಲ್ಲ. ಸಾಕ್ಷಾತ್ ವಿಷ್ಣುರೂಪಿಗಳಾದ ನೀವು ಈ ರೀತಿಯಾಗಿ ಲೀಲಾ ಮೂರ್ತಿಗಳಾಗಿ ಇಳಿದು ಬಂದು ಭೂಭಾರ ವನ್ನು ಹೋಗಲಾಡಿಸಿ ಶಿಷ್ಟರನ್ನು ಕಾಪಾಡಿದಿರಿ. ಆದಿಯಲ್ಲಿ ಮತ್ಸ್ಯದ ಆಕೃತಿಯನ್ನು ಧರಿಸಿ ವೇದವನ್ನು ಉದ್ಧರಿಸಿದೆ. ಕೂರ್ಮನಾಗಿ ಅವತರಿಸಿ ಮಂದರಪರ್ವತವನ್ನು ಎತ್ತಿ ಹಿಡಿದೆ. ವರಾಹ ರೂಪವನ್ನು ಧರಿಸಿ ಭೂಮಿ ಯನ್ನು ಉದ್ಧರಿಸಿದೆ. ಆ ಮೇಲೆ ತಂದೆ ಮಕ್ಕಳ ಜಗಳವನ್ನು ತಪ್ಪಿಸುವುದ ಕ್ಕೋಸ್ಕರ ನರಸಿಂಹನಾದೆ. ವಾಮನನಾಗಿ ಹುಟ್ಟಿ ಬಲಿಚಕ್ರವರ್ತಿಯಲ್ಲಿ ಭೂಮಿಯನ್ನು ಬೇಡಿ ಅವನ ಭಕ್ತಿಗೆ ಮೆಚ್ಚಿ ಅವನ ಬಾಗಿಲನ್ನು ಕಾದೆ. ಅನಂತರ ಪರುಶುರಾಮನಾಗಿ ಹುಟ್ಟಿ ನೀಚರಾದ ರಾಜರನ್ನು ಸಂಹರಿಸಿದೆ. ಕೃಷ್ಣ ರಾಮಾಭಿದಾನದಿಂದ ಅಯೋಧ್ಯೆಯಲ್ಲಿ ಜನಿಸಿ ಹೆಂಗಸಿಗಾಗಿ ಸಮುದ್ರವನ್ನು ಕಟ್ಟಿದವನು ನೀನೆ. ಈಗ ಒಲಿದು ಮತ್ತೆ ಸಜ್ಜನರ ರಕ್ಷಣೆ ಗಾಗಿ ನನಗೆ ಮಗನಾಗಿ ಹುಟ್ಟಿದೆ. ಮುಂದೆ ಕಲಿಯುಗದಲ್ಲಿ ಅನೇಕ ನಾಮಾಕೃತಿಗಳಿಂದ ಮೆರೆಯುವ ದೈವವೂ ನೀನೆ. ಕೃಷ್ಣಾ, ಹಲವು ಮುನಿವರರಿಗೆ ತಿಳಿಯಲಾಗದ ನಿನ್ನ ತತ್ವಸ್ವರೂಪವನ್ನು ನಾನು ಹೇಗೆ ತಿಳಿಯಬಲ್ಲೆ? ಸೂತಿಕಾಗೃಹದಲ್ಲಿಯೇ ನೀನು ನಿನ್ನ ನಿಜರೂಪವನ್ನು ತೋರಿಸಿ ನಮಗೆ ಜ್ಞಾನ ದಾನಮಾಡಿದೆ. ಆದರೆ ಮತ್ತೆ ನಾವು ಮಾಯಾ ಧೀನರಾಗಿ ನಿನ್ನನ್ನು ಮಗನೆಂದು ತಿಳಿದೆವು. ನೀನು ನನ್ನನ್ನು ಕಾಪಾಡ ಬೇಕು" ಹೀಗೆ ವಸುದೇವನು ಹೇಳಿದ ಮಾತಗಳನ್ನು ಕೇಳಿ ಕರುಣಾ ಸಮುದ್ರನಾದ ಶ್ರೀ ಕೃಷ್ಣಪರಮಾತ್ಮನು ನಸುನಗುತ್ತಾ ಜನನೀ ಜನಕರನ್ನು ಸಂತೈಸಿ "ನೀವು ಹೇಳಿದ ಎಲ್ಲ ಗುಣಗಳೂ ನನ್ನಲ್ಲಿ ಉಂಟು. ನಾನು ಅಖಿಲಾತ್ಮಕನು. ನಿರ್ಮಲ ಮತಿಗಳಾದ ಭಕ್ತರಿಗೆ ನನ್ನ ನಿಜರೂಪವು ಸ್ಪಷ್ಟವಾಗಿದೆ. ಶತ್ರುವಿನಾಶಾರ್ಥವಾಗಿ ನಾನು ಇಲ್ಲಿ ಹುಟ್ಟಿದೆನು." ಹೀಗೆ ನುಡಿದು ತನ್ನ ಮಾತಾಪಿತೃಗಳಿಗೆ ಅನಂತ ಸುಖವನ್ನು ಅನುಗ್ರಹಿಸಿ ದ್ವಾರವತಿಯಲ್ಲಿ ಆನಂದದಿಂದಿದ್ದನು. ಪರಮ ಋಷಿಗಳೂ, ತಪಸ್ವಿಗಳೂ, ಮುನಿವರರೂ, ನಿತ್ಯಾತ್ಮನ ದರ್ಶನಕ್ಕಾಗಿ ದ್ವಾರವತಿಗೆ ಸಂತಸವಾಗಿ ಬಂದು ಹೋಗುತ್ತಿದ್ದರು. ಇರುಳು ಹಗಲು ಒಂದೇ ಸಮನಾಗಿ ಆ ಪಟ್ಟಣದ ಬಾಗಿಲುಗಳನ್ನು ತೆರದೇ ಇರುತ್ತಿದ್ದರು. ದ್ವಾರವತಿಯ ಮಹಾದ್ವಾರದ

ಮಣಿಕಪಾಟಗಳು ವಿಷಯ ಚಿಂತಾತುರರಿಗೆ ದೊರೆತನದ ಜನ್ಮದಂತೆ ವ್ಯರ್ಥವಾದವು, ಬಂದು ಹೋಗುವ ಭಕ್ತಸಂತತಿಯ ಪ್ರವಾಹದಲ್ಲಿ ಆ ನಗರದ ಬಾಗಿಲು ಮುಚ್ಚಲು ಎಡೆಯೇ ಇರಲಿಲ್ಲ. ಸನ್ಮತಿ, ತುಷ್ಟಿ ಪುಷ್ಟಿ, ವಿರಕ್ತಿ, ಭಕ್ತಿ, ಉಧೃೈ ಮುಂತಾದ ಸಮಸ್ತ ಶಕ್ತಿಗಳು ಆಕಾರಗೊಂಡು ಪುರುಷೋತ್ತಮನ ಪಾದಸೇವೆಯನ್ನು ಮಾಡುತ್ತಾ ದ್ವಾರಕಿಯಲ್ಲಿ ನೆಲಸಿದವು. ಹೀಗೆ ಯೋಗಮಾಯೇಶ್ವರನು ಒಲಿದು ಪಾಪಪರಿಹಾರಕನಾಗಿ ಶರಣಜನ ಸಂಸಾರಿಕನಾಗಿ ದ್ವಾರವತಿಯಲ್ಲಿ ಮೆರೆದನು.